ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯ ವಿರಚಿತಂ

# ಅಣುಭಾಷ್ಯಂ

(ಕನ್ನಡ ಪ್ರತಿಪದಾರ್ಥ ಪಾದಾರ್ಥ ಸಂಗ್ರಹ ಬ್ರಹ್ಮಸೂತ್ರಾಣಿ ಭಾಷ್ಯಾರ್ಥ
-ಸಂಗ್ರಹ ಸಹಿತ

ಅನುವಾದಕರು
**ಪಂಡಿತ ಹನುಮೇಶಾಚಾರ್ಯ ಗಂಗೂರ**

**ಶ್ರೀ ರಾಘವೇಂದ್ರಾಶ್ರಮ**
ನಂ 56/10, 17ನೇ ಅಡ್ಡರಸ್ತೆ ಮಲ್ಲೇಶ್ವರಂ
ಬೆಂಗಳೂರು-560 055

ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯ ವಿರಚಿತಂ

# ಅಣುಭಾಷ್ಯಂ

(ಕನ್ನಡ ಪ್ರತಿಪದಾರ್ಥ ಪಾದಾರ್ಥ ಸಂಗ್ರಹ ಬ್ರಹ್ಮಸೂತ್ರಾಣು ಭಾಷ್ಯಾರ್ಥ
-ಸಂಗ್ರಹ ಸಹಿತ)


ಅನುವಾದಕರು

ಪಂಡಿತ ಹನುಮೇಶಾಚಾರ್ಯ ಗಂಗೂರ



ಪ್ರಕಾಶಕರು :

ಶ್ರೀ ರಾಘವೇಂದ್ರಾಶ್ರಮ

ನಂ 56/10, 17ನೇ ಅಡ್ಡರಸ್ತೆ, ಮಲ್ಲೇಶ್ವರಂ

ಬೆಂಗಳೂರು-560 055

# ANUBHASHYAM

by

Sriman Madhwacharya

ಮೊದಲನೆಯ ಮುದ್ರಣ- 1980

ಪ್ರಕಾಶಕರು :

ಶ್ರೀ ರಾಘವೇಂದ್ರಾಶ್ರಮ

ನಂ 56/10, 17ನೇ ಅಡ್ಡರಸ್ತೆ ಮಲ್ಲೇಶ್ವರಂ

ಬೆಂಗಳೂರು-560 055

**ಬೆಲೆ ರೂ 8–00**

ಮುದ್ರಕರು :

ಮಧು ಪ್ರಿಂಟರ್ಸ್,

ಬೆಂಗಳೂರು-22.

# ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯರು.



ಅನಂತೋऽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯ ಸಂಗ್ರಹೆ ।
ಅಹೋ ಆತ್ಮ ಪರಿಜ್ಞಪ್ತ್ಯೈ ಕೃಷ್ಣೇನೈವಾನನಾಂತರೆ ॥

ಯಶೋದಾನಂದನನಾದ ಶ್ರೀ ಕೃಷ್ಣನು ತನ್ನಮಾತೆಗೆ
ವದನದಲ್ಲಿಯೇ ಅನಂತಬ್ರಹ್ಮಾಂಡವನ್ನು ಪ್ರದರ್ಶಿಸಿದಂತೆ
ಮಹಾಮಹಿಮಾಶಾಲಿಗಳಾದ. ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯರು.
ಶಬ್ದ ಸಂಕ್ಷಿಪ್ತವಾದ ಈ ಅಣುಭಾಷ್ಯದಲ್ಲಿ ಅಪರಿಮಿತವಾದ ಅರ್ಥಗಳನ್ನು ಪ್ರಕಟಿಸಿ
ಸಜ್ಜನರನ್ನು ಅನುಗ್ರಹಿಸಿದ್ದಾರೆ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶರಾದ
ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀ ಪಾದಂಗಳವರು.



ಇದಾನೀಂ ಸೀತಾರ್ಚಾ ಸಹಿತ ರಘುಪಾರ್ಚಾರ್ಚನರತೊ
ಪ್ರಮೋದಾಖ್ಯೊ ಯೋಗೀ ವಿತರತಿ ಸುತೀರ್ಥಂ ಕ್ಷಿತಿತಲೇ।
ಅಪಾಸ್ಯಾದ್ವೈತಂ ಯಸ್ಸುರವರ ಶಿರೋಭೂಷಣಸುಧಾಂ
ಪ್ರವಕ್ತ್ಯಾಯಂ ಸಮ್ಯಕ್ ಶುಚಿತಮುವಚೋಭಿಃ ಶ್ರುತಿಗಣೈಃ ॥

ಶ್ರೀರಾಘವೇಂದ್ರ ಗುರುಸಾರ್ವಭೌಮರ ಆರಾಧನಾ ಮಹೋತ್ಸವದ ಶುಭಸಂದರ್ಭದಲ್ಲಿ
ತಮ್ಮ ಪವಿತ್ರ ಅಮೃತಹಸ್ತದಿಂದ
ಈ ಗ್ರಂಥವನ್ನು ಬಿಡುಗಡೆ ಮಾಡಿ ಪರಮಾನುಗ್ರಹಿಸಿದ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯತ್ವಾದ್ಯನೇಕ ಗುಣಗಣಾಲಂ-ಕೃತರಾದ, ಶ್ರೀಮದ್ವೈಷ್ಣವ ಸಿದ್ಧಾಂತಪ್ರತಿಷ್ಠಾಪನಾಚಾರ್ಯ, ಶ್ರೀಮನ್ಮಧ್ವಾ-ಚಾರ್ಯಮೂಲ ಮಹಾಸಂಸ್ಥಾನ ಶ್ರೀಮದುತ್ತರಾದಿ ಮಠಾಧೀಶರಾದ, ಪರಮತನಿರಾಕರಣಪೂರ್ವಕ ಸ್ವಮತಸ್ಥಾಪಕರಾದ, ವಾದಿಗಜ ಪಂಚಾನನರಾದ ಶ್ರೀನ್ಯಾಯ ಸುಧಾ ಮಂಡನಾಚಾರ್ಯರಾದ, ತಪೋವಿದ್ಯಾ ವಿರಕ್ತ್ಯಾದಿ ಸಮನ್ವಿತರಾದ,
ಅಭಿನವಸತ್ಯಧ್ಯಾನ ತೀರ್ಥರಾದ

ಶ್ರೀಮತ್ಪರಮ ಪೂಜ್ಯರಾದ

## ಶ್ರೀ ೧೦೦೮ ಶ್ರೀಸತ್ಯ ಪ್ರಮೋದತೀರ್ಥ ಶ್ರೀಪಾದಂಗಳವರು

ಅವರ ಅಡಿದಾವರೆಗಳಲ್ಲಿ ನಮ್ಮ ಭಕ್ತಿ ಪೂರ್ವಕವಾದ
ಅನಂತವಂಡವತ್ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಪ್ರಕಾಶಕರು ಹಾಗೂ ಅನುವಾದಕರು.

— ಶ್ರೀಃ —

# ಅರ್ಪಿತೇಯಂ ಕೃತಿಃ

ಗ್ರಂಥಾನುವಾದರೂಪವಾದ ಈ ಅಲ್ಪಸೇವೆಯನ್ನು
ನನ್ನ ವಿದ್ಯಾಗುರುಗಳು, ಪೂಜ್ಯ ಪಿತೃಪಾದರು,
ನ್ಯಾಯವೇದಾಂತಾದಿಸಕಲಶಾಸ್ತ್ರ ಪಾರಾವಾರ ಪಾರೀಣರು
ಪಂಡಿತಪ್ರಕಾಂಡರು, ತಪಸ್ವಿಪ್ರವರರು,
ಶ್ರೀ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ನೆಚ್ಚಿನಶಿಷ್ಯಾಗ್ರೇಸರರು
ಅನವರತ ಪಾಠ ಪ್ರವಚನರತರು ಆಗಿರುವ, ಜಾಲೀಹಾಳನಿವಾಸಿಗಳಾದ

**ಶ್ರೀ ಮತ್ಪೂಜ್ಯ ಗಂಗೂರ ರಾಮಾಚಾರ್ಯರು**

ಅವರ ಸನ್ನಿಧಾನದಲ್ಲಿ ಭಕ್ತಿಪೂರ್ವಕ ಅನಂತದಂಡವತ್ಪ್ರಣಾಮಗಳೊಂದಿಗೆ
ಸಮರ್ಪಿಸುವೆನು—

**ಹನುಮೇಶ.**

# ಶ್ರೀ ಬಾದರಾಯಣೋ ವಿಜಯತೆ.

ಶ್ರೀ ಮತ್ಪರಮಪೂಜ್ಯ ಗಂಗೂರ ರಾಮಾಚಾರ್ಯರು. ಜಾಲೀಹಾಳ.



ಶ್ರೀ ಮದ್ವೈರಾಗ್ಯ ಭಕ್ತಿ ಪ್ರಮುಖ ಶುಭಗುಣ ಶ್ರೇಣಿ ಮಾಣಿಕ್ಯವಾರ್ಧಿಃ

ಮೀಮಾಂಸಾ ತರ್ಕಶಬ್ದಸ್ಮೃತಿ ಶಿಖರ ಮುಖ ಪ್ರೌಢಶಾಸ್ತ್ರ ಪ್ರಚಂಡಃ ।

ಜಾಲೀಹಾಳಾಖ್ಯ ಗ್ರಾಮೇ ವಿರಚಿತವಸತಿಃ ಶಿಷ್ಯಸಂವರ್ಧನಾಯ

ಶ್ರೀ ರಾಮಾರ್ಯಃ ಪ್ರಸನ್ನಃ ಪ್ರದಿಶತು ಸತತಂ ಜ್ಞಾನಮವ್ಯಾಹತಂನಃ ॥

ಶ್ರೀ ಜಗದ್ಗುರು ಶ್ರೀ ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀ ಉತ್ತರಾದಿ ಮಠಾದೀಶರಾದ

ಶ್ರೀ ೧೦೦೮ ಶ್ರೀ ಸತ್ಯ ಪ್ರಮೋದತೀರ್ಥ ಶ್ರೀ ಪಾದಂಗಳವರ

# ಶುಭಾಶೀರ್ವಚನ.

ಉತ್ತರಾದಿಮಠ

॥ ಶ್ರೀ ದಿಗ್ವಿಜಯ ರಾಮೋ ವಿಜಯತೆ ॥ ಬಸವನಗುಡಿ,

ಬೆಂಗಳೂರು–4

ಶ್ರೀ ಹನುಮೇಶಾಚಾರ್ಯ ಗಂಗೂರ, ಇವರಿಗೆ

ಶ್ರೀ ಅಣುಭಾಷ್ಯಗ್ರಂಥಕ್ಕೆ ನೀವು ಬರೆದ ಕನ್ನಡ ಅನುವಾದವನ್ನು ನೋಡಿದೆವು. ನಾರಾಯಣಪಂಡಿತಾಚಾರ್ಯರು ಈ ಗ್ರಂಥವನ್ನು "ಅನಂತೋಽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ" ಎಂಬುದಾಗಿ ವರ್ಣಿಸಿದಂತೆ, ಅನಂತ ಪ್ರಮೇಯಗಳನ್ನು ಅತಿಪರಿಮಿತ ಶಬ್ದಗಳಿಂದ ಪ್ರಕಟಿಸಿರುವದರಿಂದ ಇದು ಭಾವಗಂಭೀರ ಗ್ರಂಥವು. ಇದರ ಅನುವಾದವನ್ನು ಕನ್ನಡದಲ್ಲಿ ಎಲ್ಲರಿಗೂ ಬೋಧವಾಗುವ ಶೈಲಿಯಲ್ಲಿ ನೀವು ಮಾಡಿದ್ದು ತುಂಬಾ ಅಭಿನಂದನೀಯ. ಇದಕ್ಕೆ ಪ್ರಕಾಶಕರಾದ ಶ್ರೀವಾಸುದೇವರಾಯರ ಕಾರ್ಯವೂ ಪ್ರಶಂಸನೀಯವಾದದ್ದು. ನೀವು ಬರೆದದ್ದಕ್ಕೆ ಶ್ರೀ ೧೦೦೮ ಶ್ರೀಪಾದಂಗಳವರು ಸಂತೋಷವ್ಯಕ್ತಪಡಿಸಿದರು. ಇಂಥ ಕಾರ್ಯಗಳು ನಿಮ್ಮಿಬ್ಬರಿಂದ ಇನ್ನೂ ಅತಿಶಯವಾಗಿ ನೆರವೇರುವಂತೆ ಆಯುರಾರೋಗ್ಯಗಳನ್ನು ಕೊಟ್ಟು ಶ್ರೀ ೧೦೦೮ ಶ್ರೀ ಪಾದಂಗಳವರು ಅನುಗ್ರಹಿಸಿರುವರೆಂದು ತಿಳಿಸಲು ನಮಗೆ ಸಂತೋಷವಾಗಿದೆ.

ಶ್ರೀ ೧೦೦೮ ಶ್ರೀಗಳವರಿಂದ ಆಜ್ಞಪ್ತ,

ಶ್ರೀ ಕೊಸನೂರ ಅಚಾರವರು ಶ್ರೀಪಾದಪುತ್ರರು.

# ವಿಷಯಾನುಕ್ರಮಣಿಕಾ

# ಪ್ರಕಾಶಕರ ಬಿನ್ನಹ

ಶ್ರೀರಾಘವೇಂದ್ರಾಶ್ರಮವು ತನ್ನ ಪ್ರಕಾಶನ ಮಾಲಿಕೆಯ ಅಂಗವಾಗಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಆರಾಧನಾ ಮಹೋತ್ಸವದ ಶುಭ ಸಂದರ್ಭದಲ್ಲಿ ಗ್ರಂಥಪ್ರೇಮಿಗಳಿಗೆ ಶ್ರೀ ಆನಂದ ತೀರ್ಥ ಭಗವತ್ಪಾದರಿಂದ ವಿರಚಿತವಾದ "ಅಣುಭಾಷ್ಯ" "ಗ್ರಂಥವನ್ನು "ಉಪಾಯನ"ವನ್ನಾಗಿ ಅರ್ಪಿ ಸುತ್ತಿರುವದು ಅತ್ಯಂತ ಸಂತೋಷದ ವಿಷಯ. ಇದುವರೆಗೆ ಹೊರಬಂದ ನಮ್ಮ ಗ್ರಂಥಗಳನ್ನು ಭಕ್ತಿಯಿಂದ ಓದುವ ವಾಚಕರ ಆದರವೇ ಈ ಗ್ರಂಥ ಪ್ರಕಾಶನಕ್ಕೆ ಮೂಲವಾಗಿರುವದು.

ಗ್ರಂಥಪ್ರಕಾಶನ ಕಾರ್ಯದೊಂದಿಗೆ, ನಮ್ಮ ಆಶ್ರಮದ ಆಶ್ರಯದಲ್ಲಿ "ಶ್ರೀ ರಾಘವೇಂದ್ರಾಶ್ರಮ ಹೈಸ್ಕೂಲ" ಎಂಬ ವಿದ್ಯಾಸಂಸ್ಥೆಯೂ ಸಹ ಸ್ಥಾಪಿತವಾಗಿರುವದು ನಮಗೆಲ್ಲರಿಗೂ ಹೆಮ್ಮೆಯ ವಿಷಯ. ಅವಿದ್ಯಾತಿಮಿರ ವನ್ನು ದೂರಮಾಡುವ ಅಧ್ಯಾತ್ಮಿಕ ವಿದ್ಯಾಸಂಸ್ಥೆಯೊಂದು ಆಶ್ರಮದ ಆಶ್ರ ಯದಲ್ಲಿ ನಿರಂತರವಾಗಿ ಬೆಳಗುತ್ತಿರುವಂತೆ ಶ್ರೀ ಗುರುರಾಜರು ಅನುಗ್ರಹಿಸಿ ಕಾರ್ಯವನ್ನು ನೆರವೇರಿಸುತ್ತಿರಲೆಂದು ಪ್ರಾರ್ಥಿಸುವೆ.

ವಾಚಕರಿಗೆ ಹರಿಗುರುಗಳಲ್ಲಿ ಭಕ್ತಿಯನ್ನು ಹುಟ್ಟಿಸಲು ಪ್ರಕಾಶಿತವಾದ "ಹರಿಗುರು ಭಕ್ತಿಕುಸುಮಾಂಜಲಿಯು" ನಮ್ಮ ಆಶ್ರಮದ ಪ್ರಥಮ ಪ್ರಕಟನೆ ಯಾಗಿದೆ.ಗುರುಭಕ್ತಿಯು ಪ್ರಬಲವಾದ ಹರಿಭಕ್ತಿಗೆ ಜನಕವಾದುದರಿಂದ, ಗುರು ಮಹಾತ್ಮ್ಯವನ್ನು ತಿಳಿಸುವ "ಶ್ರೀಮನ್ಮಧ್ವಚರಿತಮಾನಸ"ವು ನಮ್ಮ ಆಶ್ರಮದಿಂದ ದ್ವಿತೀಯ ಗ್ರಂಥವಾಗಿ ಹೊರಬಂದಿತು. ಹರಿಗುರುಭಕ್ತಿಯನ್ನು ಸಂಪಾದಿಸಿದ ಸುಜನರು, ಸದಾಸದಾಚಾರಿಗಳಾಗಿ ಶಾಸ್ತ್ರ ವಿಹಿತಧರ್ಮಾಚರಣೆಯಿಂದ ಶ್ರೀ ಕೃಷ್ಣನ ಮಹಾತ್ಮ್ಯವನ್ನು ಹಾಗೂ ವೈಷ್ಣವದೀಕ್ಷೆಯ ಅವಶ್ಯಕತೆಯನ್ನು, ಅರಿತು ಕೊಂಡು ಶ್ರೀಕೃಷ್ಣನ ಪ್ರೇಮಜಾಲಕ್ಕೆ ಬಲಿಯಾಗಿ, ಆತನ ನಾಮಸ್ಮರಣ ಸ್ತೋ ತ್ರದಲ್ಲಿ ನಿರತರಾಗುವ ಪದ್ಧತಿಯನ್ನರುಹುವ, "ದ್ವಾದಶಸ್ತೋತ್ರ, ಸದಾಚಾ ರಸ್ಮೃತಿ, ಕೃಷ್ಣಾಮೃತ ಮಹಾರ್ಣವಗಳನ್ನೊಳಗೊಂಡ ಅಪೂರ್ವ ಕೃತಿಯು ತೃತೀ ಯವಾಗಿ, ಆವಿರ್ಭಾವವಾಯಿತು. ಪರಮಾತ್ಮನ ಮಹಾತ್ಮ್ಯವನ್ನರಿತ ಮಹನೀ ಯರು, ಆತನ ಅನಂತ ಗುಣಪರಿಪೂರ್ಣತ್ವಾದಿ ವಿಶಿಷ್ಟಮಹಿಮೆಯನ್ನರಿತು, ಸರ್ವದೋಷಗಳಿಂದ ದೂರನಾದ ಪರಮಾತ್ಮನನ್ನು ಸಾಧನ ಸಂಪತ್ತಿಯಿಂದ

ಹೊಂದಿ, ನಿರಂತರ ಸುಖದೆಡೆಗೆ ಕರೆದೊಯ್ದು ಚತುರ್ವಿಧ ಪುರುಷಾರ್ಥವನ್ನೀಯುವ ಕಲ್ಪವೃಕ್ಷದಂತಿರುವ "ಅಣುಭಾಷ್ಯವು" ವಾಚಕರಿಗೆ ನಿಜವಾಗಿ ಚತುರ್ವಿಧ ಪುರುಷಾರ್ಥವನ್ನು ಸದ್ಯದಲ್ಲಿಯೇ ಹೊಂದಿಸುತ್ತದೆಯೋ ಏನೋ ಎಂಬಂತೆ ಚತುರ್ಥವಾಗಿ ಹೊರಬಂದಿರುವದು. ಅಗ್ನಿಯು ಕಣಗಳು ಚಿಕ್ಕದಾದರೂ ವಿಶ್ವವನ್ನೇ ಸುಡುವ ಸಾಮರ್ಥ್ಯವನ್ನು ಹೊಂದಿರುವಂತೆ, ಅಚಾರ್ಯರ ಈ ಕೃತಿ ಚಿಕ್ಕದಾದರೂ ಸಹ, ಜೀವರ ಸಕಲ ಕರ್ಮಗಳನ್ನು ಭಸ್ಮಮಾಡಿ, ಪರಿಶುದ್ಧಗೊಳಿಸಿ, ಅಮೃತಸುಖವನ್ನೀಯುವ ಸಾಮರ್ಥ್ಯವನ್ನು ಹೊಂದಿರುವದು. ಅನಂತಾರ್ಥಗಳನ್ನು ಹೊಂದಿರುವ ಈ ಕೃತಿಯನ್ನು ಅನೇಕಾರ್ಥಗಳೊಂದಿಗೆ ಕನ್ನಡಿಸಿದವರು "ಶ್ರೀ।ಮು।ಶಾ।ಸಂ ಪಂಡಿತ ಹನುಮೇಶಾಚಾರ್ಯ ಗಂಗೂರ." ಅವರು—ಆದರೆ ಈಗ ಪ್ರಕಾಶಿತವಾಗುತ್ತಿರುವ ಈ ಪುಸ್ತಕದಲ್ಲಿ ನಾವು ಅನೇಕಾರ್ಥವನ್ನು ಕೊಡಲುಯತ್ನಿಸಿಲ್ಲ. ಸಾಮಾನ್ಯ ಜನರ ಉಪಯೋಗಕ್ಕಾಗಿ ಏಕಾರ್ಥವನ್ನು ಮಾತ್ರ ಪ್ರಕಟಿಸಿದ್ದೇವೆ. ಅನೇಕಾರ್ಥಗಳನ್ನು ಅರಿತುಕೊಳ್ಳುವದು ಕಠಿಣವಾದ್ದರಿಂದ, ಏಕಾರ್ಥವನ್ನು, ಬಲ್ಲವರಿಗೂ, ವಿದ್ವಾಂಸರಿಗೂ, ಶಾಸ್ತ್ರೀಯ ಪದ್ಧತಿಯಿಂದ ಓದಿದವರಿಗೂ ಓದುವವರಿಗೂ ಅನುಕೂಲವಾಗುವಂತೆ ಅದನ್ನು ಗ್ರಂಥಾಂತರದಲ್ಲಿ ಪ್ರಕಟಿಸುವೆವು.

ನಮಗೆ ಉಚಿತವಾದ ರೀತಿಯಲ್ಲಿ ಈ ಗ್ರಂಥವನ್ನು ಪ್ರಕಾಶ ಪಡಿಸಲು ಅನುಮತಿಯನ್ನಿತ್ತ ಶ್ರೀ। ಮು।ಶಾ।ನಂ। ಪಂಡಿತ ಹನುಮೇಶಾಚಾರ್ಯರಿಗೂ, ಹಾಗೂ ನಮ್ಮ ಅಪೇಕ್ಷೆಯಂತೆ, ವಾಚಕರಿಗೆ ತತ್ವಶಾಸ್ತ್ರದ ಮಹತ್ವದ ಅಂಶಗಳನ್ನು ಅರಿಯಲು ಅನುಕೂಲವಾಗುವಂತೆ ವಿಸ್ತೃತ ಮುನ್ನುಡಿಯನ್ನು ಬರೆದು ದಯಪಾಲಿಸಿದ, ಶ್ರೀ।ಮು।ಶಾ।ಸಂ। ಪಂಡಿತ ಮಧ್ವಾಚಾರ್ಯ ಗಂಗೂರ ಅವರಿಗೂ ನಮ್ಮ ಸಾದರ ಕೃತಜ್ಞತಾಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ನಮ್ಮ ಈ ಪ್ರಕಾಶನಕ್ಕೆ ಸಕ್ರಿಯಾವಾಗಿ ಅನುವಾದಗಳನ್ನು ಬರೆದುಕೊಟ್ಟು, ಇನ್ನು ಮುಂದೆಯೂ ಬರೆದುಕೊಡುವದಾಗಿ ಭರವಸೆಯನ್ನಿತ್ತು, ತಮ್ಮ ಅಮೌಲ್ಯ ಮಾರ್ಗದರ್ಶನಗಳನ್ನು ನೀಡುತ್ತಿರುವ ಶ್ರೀ ಪೂಜ್ಯ ಪಂಡಿತವರ್ಯ "ಕೇಶವಾಚಾರ್ಯ, ಜಾಲೀಹಾಳ," ಅವರಿಗೆ ನಮ್ಮ ಸಾದರ ಕೃತಜ್ಞತಾಪೂರ್ವಕ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇವೆ. ಕೈಗೊಳ್ಳುವ ಕಾರ್ಯಗಳಲ್ಲಿ ತಕ್ಕ ಸಲಹೆಗಳಿಂದ ನಮ್ಮನ್ನು ಪ್ರೋತ್ಸಾಹಿಸುತ್ತಿರುವ, ಶ್ರೀಯುತ್, ಟಿ. ಆರ್. ಅನಂದಮೂರ್ತಿ ದಂಪತಿಗಳಿಗೂ ನಮ್ಮ ಹಾರ್ದಿಕ ಕೃತಜ್ಞತಾಪೂರ್ವಕ ವಂದನೆಗಳು.

ಈ ಗ್ರಂಥಪ್ರಕಾಶನಕ್ಕೆ ಔದಾರ್ಯದ ಭರವಸೆಯನ್ನಿತ್ತ ದಿ! ಎಂ. ಶೇಷಗಿರಿರಾವ್ ಅವರ ಧರ್ಮಪತ್ನಿ ಶ್ರೀಮತಿ ಶೇಷಾಬಾಯಿಯವರಿಗೂ ಹಾಗೂ ಅವರ ಕುಟುಂಬದವರಿಗೂ, ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯರು ಆಯುರಾರೋಗ್ಯ ಐಶ್ವರ್ಯಾದಿಗಳನ್ನಿತ್ತು ಅನುಗ್ರಹಿಸಲೆಂದು ಪ್ರಾರ್ಥನೆ.

ಈ ಗ್ರಂಥದ ಮುದ್ರಣದಲ್ಲಿ ಆಸಕ್ತಿಯನ್ನು ವಹಿಸಿ. ಪರಿಶ್ರಮಿಸಿದ "ಮಧು ಪ್ರಿಂಟರ್ಸ್ ಅಂಡ್ ಪಬ್ಲೀಶರ್ಸ"ದ ಮಾಲಿಕರಾದ ಶ್ರೀ ಕೃಷ್ಣಮೂರ್ತಿಯವರಿಗೆ ನಮ್ಮ ಧನ್ಯವಾದಗಳು ಹಾಗೆಯೇ ಅಲ್ಪಕಾಲದಲ್ಲಿಯೇ ಅನೇಕ ಪುಟಗಳ ಮುದ್ರಣ ಭಾರವನ್ನು ಹೊತ್ತು ನೆರವಾದ ಶ್ರೀ M/s ಪ್ರಭಾ ಪ್ರಿಂಟರ್ಸ ಅಂಡ್ ಪಬ್ಲಿಶರ್ಸ ಹಾಗೂ M/s ನಿರ್ಮಲಾ ಪ್ರಿಂಟರ್ಸ ಅವರಿಗೂ ನಾವು ಕೃತಜ್ಞರಾಗಿದ್ದೇವೆ. ಈ ಗ್ರಂಥ ಪ್ರಕಾಶನ ಕಾರ್ಯದಲ್ಲಿ ಪ್ರತ್ಯಕ್ಷ–ಅಪ್ರತ್ಯಕ್ಷವಾಗಿ ಸಹಾಯಕರಾದವರಿಗೆಲ್ಲರಿಗೂ ನಮ್ಮ ಕೃತಜ್ಞತೆಗಳು.

ಶ್ರೀ ರಾಘವೇಂದ್ರಾಶ್ರಮ
ಮಲ್ಲೇಶ್ವರಂ ಬೆಂಗಳೂರು–೨೩
ತಾ॥ 24–8–1980

ಬಿ.ಎನ್. ವಾಸುದೇವರಾವ್
ಮ್ಯಾನೇಜಿಂಗ ಟ್ರಸ್ಟಿ.

# ಮೊದಲ ಮಾತು

"ಅಣುಭಾಷ್ಯ" ಶ್ರೀಮದಾಚಾರ್ಯರ ಕೃತಿಗಳಲ್ಲಿ ಅತ್ಯಂತ ಮಹತ್ವದ ಅನಂತಾರ್ಥ ಗರ್ಭಿತವಾದ ಛಂದೋಬಂಧವಾದ ಪುಟ್ಟ ಶಾಸ್ತ್ರಗ್ರಂಥವಾಗಿದೆ. ಮುಮುಕ್ಷುಗಳು ಅವಶ್ಯವಾಗಿ ಅಭ್ಯಸಿಸಲೇಬೇಕಾದ ಶ್ರೀ ಬಾದರಾಯಣರ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನಭೂತವಾದ ಈ ಗ್ರಂಥವು, ಪ್ರತಿಯೊಬ್ಬರಿಂದಲೂ ಗುರುಮುಖದಿಂದ ಅವಶ್ಯವಾಗಿ ಅಧ್ಯೇಯವಾಗಿದೆ. ಗುರುಮುಖದಿಂದ ಶ್ರವಣ ಮಾಡಿರುವದನ್ನು ಅಧಿಕಾರಿಸಾಮಾನ್ಯರಿಗೂ ಮನನ ಮಾಡಲು ಅನುಕೂಲ ವಾಗುವಂತೆ ಕನ್ನಡ ಅನುವಾದದೊಂದಿಗೆ ಈ ಗ್ರಂಥವನ್ನು ಇಲ್ಲಿ ಪ್ರಕಾಶಿಸ ಲಾಗಿದೆ.

ಪ್ರಕಾಶಕರ ಇಚ್ಛೆಯ ಮೇರೆಗೆ ಈ ಗ್ರಂಥವನ್ನು ಎರಡು ಪುಸ್ತಕಗಳಲ್ಲಿ ವಿಂಗಡಿಸಲಾಗಿದೆ. ಪ್ರತಿಪದಾರ್ಥದಿಂದ ಕೂಡಿದ ಸರಳ ಕನ್ನಡ ಅನುವಾದ ಹಾಗೂ ಸೂತ್ರಾರ್ಥಾನುಸಂಧಾನ ಪೂರ್ವಕವಾಗಿ ಅಣುಭಾಷ್ಯವನ್ನು ಪಠಣ ಮಾಡಲು ಅನುಕೂಲವಾಗುವಂತೆ "ಬ್ರಹ್ಮಸೂತ್ರಾಣುಭಾಷ್ಯಾರ್ಥ ಸಂಗ್ರಹ" ವನ್ನು ಈಗ ವಾಚಕರ ಕೈಸೇರುತ್ತಿರುವ ಮೊದಲನೆಯ ಪುಸ್ತಕದಲ್ಲಿ ಪೂರೈ ಸಲಾಗಿದೆ. ಎರಡನೆಯ ಪುಸ್ತಕದಲ್ಲಿ ಅಣುಭಾಷ್ಯದ ಪ್ರಾಚೀನ ಟೀಕಾ ಟಿಪ್ಪ ಣಿಗಳಲ್ಲಿಯ ಸಮಗ್ರ ವಿಷಯಗಳನ್ನು, ಹಾಗೂ ನನ್ನ ಅಧ್ಯಯನ ಸಮಯ ದಲ್ಲಿ ಗುರುಮುಖದಿಂದ ನಿಸ್ಸೃತವಾದ ಅನೇಕ ಅಪೂರ್ವ ಮಹತ್ವದ ವಿಷಯ ಗಳನ್ನು ಶಾಸ್ತ್ರಾಂತರ ಉತ್ಪತ್ತಿಯಿಂದ ಪ್ರತಿಯೊಂದು ಪದದ ಉತ್ಪತ್ತಿ ಪ್ರದ ರ್ಶನಪೂರ್ವಕ ಪ್ರತಿಸೂತ್ರಕ್ಕೂ ಅಣುಭಾಷ್ಯವು ಅಪೂರ್ವವ್ಯಾಖ್ಯಾನವನ್ನು ಒದ ಗಿಸಿದೆ ಎಂಬುದನ್ನು ದ್ವಿತಿಯ ಪುಸ್ತಕದಲ್ಲಿ ವಿವರಿಸಲಾಗುವದು.

ನನ್ನ ಅಧ್ಯಯನ ಸಮಯದಲ್ಲಿ ಗುರುಮುಖದಿಂದ ವಿದಿತವಾದ ಸಂಪ್ರ ದಾಯಪ್ರಾಪ್ತ-ಹಾಗೂ ಪ್ರಾಚೀನ ವ್ಯಾಖ್ಯಾನಗಳಿಂದ ಪ್ರಮಿತವಾದ ಪ್ರಮೇ ಯಗಳನ್ನು ಮಾತ್ರ ಈ ಗ್ರಂಥದಲ್ಲಿ ಬುದ್ಧಿ ಶುದ್ಧಿಗಾಗಿ ಸಂಗ್ರಹಿಸಿದ್ದೇನೆ. ಇದರಿಂದ ವಾಚಕರಿಗೆ ಉಪಕಾರವಾದಲ್ಲಿ ಅದು ನನ್ನ ಗುರುಗಳ ಕೃಪಾ ವಿಶೇಷವೆಂದು ಭಾವಿಸುದೆ, ಸಂಗ್ರಹಕಾರನ ಬುದ್ಧಿಮಾಂದ್ಯದಿಂದ ಪ್ರಮಾದ ಗಳೇನಾದರೂ ಕಂಡು ಬಂದಲ್ಲಿ ಅವುಗಳನ್ನು ತಿಳಿಸಿಕೊಟ್ಟು ಉಪಕರಿಸುವ ಮಹನೀಯರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುವೆನು.

ಗ್ರಂಥ ನಿರ್ಮಾಣದಲ್ಲಿ ಸದ್ಮಾರ್ಗದರ್ಶನವನ್ನಿತ್ತ ನನ್ನ ಅಣ್ಣಂದಿರಾದ "ಶ್ರೀ ಪೂಜ್ಯ ಪಂಡಿತ ಭೀಮಸೇನಾಚಾರ್ಯರು ಹಾಗೂ ಶ್ರೀ ಪೂಜ್ಯ ಪಂಡಿತ ಶ್ರೀನಿವಾಸಾಚಾರ್ಯರು" ಅವರುಗಳಿಗೆ ನನ್ನ ಅನಂತ ಪ್ರಣಾಮಗಳನ್ನು ಸಲ್ಲಿಸುವೆನು. ನನ್ನ ಹಾಗೂ ಪ್ರಕಾಶಕರ ಉತ್ಕಟ ಇಚ್ಛೆಯಂತೆ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಒದಗಿಸಿ ನನ್ನ ಹಿರಿಯ ಸಹೋದರರಾದ ಶ್ರೀ ಪಂಡಿತ ಮಧ್ವಾಚಾರ್ಯರಿಗೂ ನನ್ನ ಪ್ರಣಾಮಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುವೆನು.

ಗ್ರಂಥ ಪ್ರಕಾಶನ ವ್ಯಾಜದಿಂದ ನನನ್ನು ಸತ್ಕಾರ್ಯ ಪುಣ್ಯಭಾಗಿಯನ್ನಾಗಿ ಮಾಡಿದ ಈ ಗ್ರಂಥ ಪ್ರಕಾಶಕರಾದ ಶ್ರೀ ಬಿ. ಎನ್. ವಾಸುದೇವರಾವ್ ಅವರಿಗೆ ನಮ್ಮ ಅಭಿಮಾನ ಪೂರ್ವಕ ಕೃತಜ್ಞತೆಗಳು ಮೀಸಲಾಗಿರುವವು, ಅವರ ಹರಿಗುರುಭಕ್ತಿ ಪರಾಯಣತೆ–ಮಧ್ವಶಾಸ್ತ್ರ ಪ್ರಚಾರದಲ್ಲಿ ಅವರು ಕೈಗೊಂಡು ಬದ್ಧದೀಕ್ಷೆ-ಸತತ ಪರಿಶ್ರಮ-ಫಲವಾಗಿಯೆ ಈ ಗ್ರಂಥವು ವಾಚಕರ ಕೈಸೇರುತ್ತಿರುವದೆಂಬುವದರಲ್ಲಿ ಯಾವ ಸಂಶಯವೂ ಇಲ್ಲ. ಸದಾ ಸತ್ಕಾರ್ಯನಿರತರಾಗಿ ಹರಿಗುರುಗಳ ಸೇವೆಯಲ್ಲಿ ಬದ್ಧಾದವರಾದ ಶ್ರೀ ವಾಸುದೇವರಾವ್ ದಂಪತಿಗಳಿಗೆ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಅಂತರ್ಯಾಮಿಯಾದ ಪರಮಾತ್ಮನು ಅಪೇಕ್ಷಿತ ಸಂಪೂರ್ಣ ಫಲವನ್ನೀಡೇರಿಸಲಿ "ಎಂದು ಭಗವಂತನನ್ನು ಪ್ರಾರ್ಥಿಸಿ, ಅಧಿಕಾರೀ, ವಾಚಕ ವೃಂದಕ್ಕೆ ಈ ಗ್ರಂಥದನ್ನು ಅರ್ಪಿಸುವೆನು.

ಬೆಂಗಳೂರು–54
15–1–1980

**ಹನುಮೇಶಾಚಾರ್ಯ ಗಂಗೂರ.**

|| ಶ್ರೀ ಬಾದರಾಯಣೋ ವಿಜಯತೇ ||

# ಮುನ್ನುಡಿ

ಬ್ರಹ್ಮಾಂತಾ ಗುರುಸ್ಸಾಕ್ಷಾದಿಷ್ಟಂ ದೈವಂ ಶ್ರಿಯಃಪತಿಃ |
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ||

## ದರ್ಶನಗಳು

"ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ |
ಸರ್ವೇ ಭದ್ರಾಣಿ ಪಶ್ಯಂತು ಮಾಕಶ್ಚಿದ್ದುಃಖಭಾಗ್ಭವೇತ್ ||"

ಎಲ್ಲರೂ ಸುಖಿಗಳಾಗಲಿ. ರೋಗಗಳಿಂದ ಬಳಲದಿರಲಿ. ಸರ್ವದಾ ಶುಭವನ್ನೇ ಕಾಣುತ್ತಿರಲಿ. ಎಂದಿಗೂ ದುಃಖ ಭಾಗಿಗಳಾಗದಿರಲಿ—ಎಂಬುದು ಪ್ರತಿಯೊಬ್ಬ ಸುಜೀವಿಯ ಸದಿಚ್ಛೆಯಾಗಿದೆ. ಮಾನವನು ಸಂಸಾರದಲ್ಲಿ ಪ್ರವಿಷ್ಟನಾದರೆ ಸುಖ-ದುಃಖಗಳ ಜಂಜಾಟದಲ್ಲಿ ಸಿಲುಕುವುದು ಸ್ವಾಭಾವಿಕ. ಸಂಸಾರ ಚಕ್ರದಲ್ಲಿ ಸಿಲುಕಿ ಕಷ್ಟ-ನಷ್ಟಗಳನ್ನು ಅನುಭವಿಸುತ್ತ ಪರಿಭ್ರಮಿಸುತ್ತಿರುವ ಅವನನ್ನು ಉದ್ಧರಿಸುವ ಶ್ರೇಷ್ಠ ಶಕ್ತಿಗಳೆಂದರೆ ದರ್ಶನಗಳು. ಉತ್ತಮವಾದ ದರ್ಶನ ಶಕ್ತಿಯಿಂದ ಮನುಷ್ಯನು ಜೀವನ ಸಂಗ್ರಾಮದಲ್ಲಿ ವಿಜಯಿಯಾಗಿ ನಿತ್ಯ ನಿತ್ಯ-ನಿರಂತರ-ನೈಜ-ಸುಖಾನುಭವರೂಪವಾದ ಆತ್ಮಸಾಕ್ಷಾತ್ಕಾರ ಸಿದ್ಧಿಯನ್ನು ಪಡೆಯಲು ಸಾಧ್ಯವಾಗುವದು.

"ದೃಶ್ಯತೇ ಅನೇನ ಇತಿ ದರ್ಶನಮ್" ಎಂಬ ವ್ಯುತ್ಪತ್ತಿಯಿಂದ 'ದರ್ಶನ'ವೆಂದರೆ ಸರಿಯಾದ ವಸ್ತುಸ್ವರೂಪವನ್ನು ತಿಳಿಸ ಹೊರಟ ಶಾಸ್ತ್ರ ಎಂದರ್ಥವಾಗುವದು. ಅಥವಾ ಯಾವುದರ ಮುಖಾಂತರ ನಾವು ಸರಿಯಾದ ವಸ್ತು ಸ್ವರೂಪವನ್ನು ತಿಳಿದುಕೊಳ್ಳಲು ಸಮರ್ಥರಾಗುವೆವೋ ಅದು ದರ್ಶನವೆಂದು ಕರೆಯಲ್ಪಡುವದು. ನಾವು ಯಾರು ? ಈ ಜೀವನದಲ್ಲಿ ಸಾಧಿಸಬೇಕಾದ ಗುರಿ ಯಾವುದು ? ಜಗತ್ತಿನ ಸ್ವರೂಪವೇನು ? ಅದರ ಸೃಷ್ಟಿಕರ್ತನಾರು ? ಇವೇ ಮೊದಲಾದ ಜಟಿಲ ಪ್ರಶ್ನೆಗಳಿಗೆ ಸಮರ್ಪಕ ಉತ್ತರಗಳನ್ನಿತ್ತು, ಆತ್ಮಸಾಕ್ಷಾತ್ಕಾರ ಸಿದ್ಧಿಯನ್ನು ಹೊಂದಲು ಮನುಷ್ಯನು ಅನುಸರಿಸಬೇಕಾದ ಸಾಧನಗಳನ್ನು ತಿಳಿಯಪಡಿಸುವದೇ ದರ್ಶನಗಳ ಉದ್ದೇಶವಾಗಿದೆ. ಅವನಿಗೆ ಈ ದಿಶೆಯಲ್ಲಿ ತತ್ವಗಳನ್ನು ಬೋಧಿಸುವ ಹತ್ತಾರು ದರ್ಶನಗಳು ಕಣ್ಣಿಗೆ ಬೀಳುತ್ತಿದ್ದರೂ. ಅವುಗಳೆಲ್ಲವೂ ಸರಿಯಾದ ಮಾರ್ಗದರ್ಶಕಗಳೆಂದು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ. ವಿಚಾರಶೀಲರಾದವರು ಪೂರ್ವಗ್ರಹ—

ಪೂರ್ವಾಗ್ರಹಗಳಿಲ್ಲದೇ ಸಕಲ ದರ್ಶನಗಳನ್ನು ಚಿಕಿತ್ಸಕದೃಷ್ಟಿಯಿಂದ ವಿಮರ್ಶಿಸಿ, ಸರಿಯಾದ ದರ್ಶನಪಥದಲ್ಲಿ ಮುನ್ನಡೆದರೆ ತಮ್ಮ ಜೀವನದ ಗುರಿಯನ್ನು ಸಾಧಿಸಬಲ್ಲರು.

## ದರ್ಶನಗಳ ವಿಭಿನ್ನತೆ

ಜಗತ್ತಿನಲ್ಲಿ ಅನೇಕ ದರ್ಶನಗಳು ಪ್ರವೃತ್ತವಾಗಿದ್ದರೂ, ಅವುಗಳಲ್ಲಿ ಬೋಧಿಸುವ ತತ್ವಗಳಲ್ಲಿ ಸಾಕಷ್ಟು ವಿಭಿನ್ನತೆಗಳು ಕಂಡು ಬರುತ್ತಿವೆ. ಪ್ರತಿಯೊಬ್ಬ ದರ್ಶನಕಾರರೂ ತಮ್ಮ ತಮ್ಮ ಸಿದ್ಧಾಂತವೇ ಯಥಾರ್ಥವೆಂದು ಸಾಧಿಸಲು ಪ್ರಯತ್ನಿಸಿದ್ದಾರೆ. ಮೂಲಾಂಶಗಳಲ್ಲಿ ಒಂದಕ್ಕೊಂದು ವಿರುದ್ಧ ಪ್ರಮೇಯಗಳನ್ನು ಬೋಧಿಸುವ ಎರಡೂ ದರ್ಶನಗಳು ಸತ್ಯವಾದವುಗಳೇ ಎಂದು ಹೇಳಲೂ ಯಾರಿಂದಲೂ ಸಾಧ್ಯವಿಲ್ಲ. ಎಲ್ಲ ದರ್ಶನಕಾರರೂ ಸತ್ಯವನ್ನೇ ಬೋಧಿಸಲು ಇಷ್ಟಪಟ್ಟಿದ್ದರೂ ಸಹ, ಅವರವರ ಅಧ್ಯಯನ, ಬುದ್ಧಿಶಕ್ತಿ, ಪ್ರಯತ್ನ ಹಾಗೂ ಯೋಗ್ಯತೆಗಳಿಗನುಸರಿಸಿ. ಜಗತ್ತಿಗೆ ಸತ್ಯಾಂಶಗಳನ್ನು ಒದಗಿಸಿದ್ದಾರೆ. ಸಂಪೂರ್ಣವಾಗಿ ಸತ್ಯ ತತ್ವಗಳನ್ನು ನಿರೂಪಿಸುವುದರಲ್ಲಿ ಎಲ್ಲರೂ ಯಶಸ್ವಿಗಳಾಗಿಲ್ಲವೆಂಬುದನ್ನು ನಾವು ಗಮನಿಸಬೇಕು

"ಅನಾದಿಕಾಲತೋ ಪ್ರವೃತ್ತಾಃ ಸಮಯಾಪಿ ಪ್ರವಾದತಃ" ಎಂಬ ಉಕ್ತಿಯಂತೆ ಅನಾದಿಕಾಲದಿಂದಲೂ ಪ್ರಚಲಿತವಾಗಿದ್ದ ದರ್ಶನಗಳನ್ನು, ನಮ್ಮ ಪ್ರಾಚೀನ ಗ್ರಂಥಕಾರರು ನಾಸ್ತಿಕ-ಆಸ್ತಿಕವೆಂದು ಎರಡು ವಿಧವಾಗಿ ವಿಭಾಗ ಮಾಡಿದ್ದಾರೆ. ವೇದ ಪ್ರಾಮಾಣ್ಯವನ್ನು ಅಂಗೀಕರಿಸುವ ದರ್ಶನಗಳ ಆಸ್ತಿಕ ದರ್ಶನಗಳು ವೇದವನ್ನು ಪ್ರಮಾಣವಾಗಿ ಅಂಗೀಕರಿಸದ ದರ್ಶನಗಳು ನಾಸ್ತಿಕ ದರ್ಶನಗಳು ಆಸ್ತಿಕ ದರ್ಶನಗಳಲಿ ತತ್ವಶಾಸ್ತ್ರದ ಮುಲಾಂಶಗಳು ಹಾಗೂ ಉದ್ಭವಿಸುವ ಸಮಸ್ಯೆಗಳಿಗ ವೇದ ಮತ್ತು ವೇದಾನುಸಾರಿಯಾದ ಗ್ರಂಥಗಳಿಂದ ಉಪಲಬ್ಧವಾದ ಯುಕ್ತಿಗಳಿಂದ ಒದಗಿದ ಪರಿಹಾರಗಳು ಇರುವವು. ಆದರ ನಾಸ್ತಿಕ ದರ್ಶನಗಳಲ್ಲಿ ಇವುಗಳ ಯಾವ ಬಂಧನೆಯೂ ಇರುವುದಿಲ್ಲ.

ದೇಹಾತಿರಿಕ್ತವಾದ ಜೀವವಿಲ್ಲ. ಜೀವನಿಯಾಮಕನಾದ ಪರಮಾತ್ಮನಿಲ್ಲ. ಜಗದ್ವ್ಯವಹಾರಗಳೆಲ್ಲವೂ ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ತಾವಾಗಿಯೇ ನಡೆಯುವುವು ಇದಕ್ಕಾಗಿ ಪ್ರತ್ಯಕ್ಷಗೋಚರನಾಗದಿರುವ ಈಶ್ವರನನ್ನು ಅಂಗೀಕರಿಸುವ ಅವಶ್ಯಕತೆಯಿಲ್ಲ ಇಲ್ಲದ ಪರಲೋಕ ಪುಣ್ಯ–ಪಾಪಗಳ ಭಾವನೆಯನ್ನು ಹೊಂದಿ, ಉಪವಾಸ–ವನವಾಸಗಳಿಂದ ದೇಹವನ್ನು ಕೃಶವಡಿಸಿ,

ಪರಲೋಕಸುಖಕ್ಕಾಗಿ ತಪಸ್ಸನ್ನು ಅನುಷ್ಠಿಸುವುದು ಸರಿಯಿಲ್ಲ. ದುಃಖಮಿಶ್ರ ವಲ್ಲದ ಸುಖವನ್ನು ಪಡೆಯುವುದು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಜೀವಿಸಿರುವಷ್ಟು ಕಾಲ ಸಾಲವನ್ನಾದರೂ ಮಾಡಿ, ಯಥೇಷ್ಟವಾಗಿ ತಿಂದು-ಉಂಡು ಐಷಾರಾಮದಿಂದ ಸುಖವನ್ನು ಅನುಭವಿಸಿರಿ.

ಯಾವಜ್ಜೀವಂ ಸುಖಂ ಜೀವೇತ್ ಋಣಂಕೃತ್ವಾ ಘೃತಂ ಪಿಬೇತ್ ।
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಃ ಕುತಃ ॥

ಧರ್ಮ-ಕರ್ಮಗಳನ್ನು ತಿಳಿಸುವ ವೇದಗಳೇ ಇಲ್ಲ; ನಾಲ್ಕು ಜನ ಧೂರ್ತರು ಸೇರಿ, ವೇದಗಳು ಯಾರಿಂದಲೂ ರಚಿತವಾದವುಗಳಲ್ಲವೆಂದು ಅವುಗಳಿಗೆ ಅಪೌರುಷೇಯತ್ವವನ್ನು ಸಾಧಿಸಿ, ಅವರಲ್ಲಿ ಹೇಳಿದಂತೆ ಯಜ್ಞ–ಯಾಗಾದಿ ಗಳನ್ನು ಶಾಸ್ತ್ರಾಧ್ಯಯನವನ್ನು ಮಾಡಬೇಕೆಂದು ಉಪದೇಶಿಸುವುದು–ಅವರ ಉದರಭರಣಕ್ಕಾಗಿ ಇದೆಲ್ಲವೂ ಕಲ್ಪನಾಜಾಲ. ಎಂಬ ಜನಮನೋಹರವಾದ ಉಪದೇಶಗಳು ಚಾರ್ವಾಕರಂತಹ ನಾಸ್ತಿಕ ಮತಕ್ಕೆ ತಳಹದಿಯಾಗಿವೆ. ಇಂತಹ ಕಪೋಲ–ಕಲ್ಪಿತ ಪ್ರಮೇಯಗಳನ್ನೇ ಆಧರಿಸಿ ಬೌದ್ಧ-ಜೈನ ಮತಗಳೂ ಪ್ರವೃತ್ತವಾಗಿರುವವು. ಬೌದ್ಧ-ಜೈನ ಮತಗಳ ಸತತ ಅಹಿಂಸೆಯಂತಹ ಉತ್ತಮ ತತ್ವಗಳನ್ನು ಬೋಧಿಸಿವರೂ ಪರ್ಯಾವಸಾನದಲ್ಲಿ ಅವು ತಿರಸ್ಕಾರಾರ್ಹವಾಗಿವೆ. ಚಾರ್ವಾಕ ಮತದ ತತ್ವಗಳಂತೂ ಕೇಳಲು ಹಿತಕಾರಿಯಾಗಿದ್ದರೂ ಸಹ, ವೈಯಕ್ತಿಕ ಸುಖದ ಪರಕಾಷ್ಠತೆಯನ್ನು ತಲುಪುವುದಕ್ಕಾಗಿ ಸಮಾಜದಲ್ಲಿ ಅನ್ಯಾಯ–ಅನೀತಿ–ಅಹಿಂಸಾ ಪ್ರವೃತ್ತಿಗಳು ಉಲ್ಬಣಗೊಳ್ಳುವುದಕ್ಕೆ ಪ್ರಚೋದಕವಾಗಿರುವುವು. ಇಂದಿನ ಸಮಾಜವೇ ಇದಕ್ಕೆ ಪ್ರತ್ಯಕ್ಷ ನಿದರ್ಶನವಾದ್ದರಿಂದ ಹೆಚ್ಚಿನ ವಿವರಗಳನ್ನು ಕೊಡುವುದು ಅನವಶ್ಯಕ. ಆದುದರಿಂದ ನಾಸ್ತಿಕದರ್ಶನಗಳು ಮಾನವನಿಗೆ ಸುಖಸಮೃದ್ಧಿಯನ್ನು ಒದಗಿಸಲಾರವು.

ಇಂಥ ಅಹಿತಕಾರಿಗಳಾದ ನಾಸ್ತಿಕದರ್ಶನಗಳನ್ನು ನಿರಾಕರಿಸಲು ಪ್ರಬಲ ವಾದ ಆಸ್ತಿಕದರ್ಶನಗಳು ಅಸ್ತಿತ್ವಕ್ಕೆ ಬಂದವು. ಗೌತಮರ-ನ್ಯಾಯ, ಕಣಾದರ ವೈಶೇಷಿಕ ಕಪಿಲರ ಸಾಂಖ್ಯ, ಪತಂಜಲಿಗಳ ಯೋಗ, ಜೈಮಿನಿಗಳ ಪೂರ್ವಮೀಮಾಂಸಾ ಹಾಗೂ ಬಾದರಾಯಣರ ಉತ್ತರಮೀಮಾಂಸಾ (ಬ್ರಹ್ಮಮೀಮಾಂಸಾ) ಇವು ಷಡ್ದರ್ಶನಗಳೆಂದು ಪ್ರಸಿದ್ಧವಾಗಿರುವುವು. ಇವುಗಳಲ್ಲಿ ನ್ಯಾಯ-ವೈಶೇಷಿಕ-ಸಾಂಖ್ಯ-ಯೋಗದರ್ಶನಗಳು ನಾಸ್ತಿಕದರ್ಶನಗಳ ವಾದಾದಿಯನ್ನು ಸಡಿಲುಪಡಿಸುವುದರಲ್ಲಿ ಯಶಸ್ವಿಗಳಾಗಿದ್ದರೂ ಸಹ, ಆಸ್ತಿಕ ದರ್ಶನ ಮಂದಿರವನ್ನು ಸುಭದ್ರಪಡಿಸುವುದರಲ್ಲಿ ಯಶಸ್ವಿಗಳಾಗಿಲ್ಲ. ಪೂರ್ವ

ಮೀಮಾಂಸಾ ದರ್ಶನವು ಬಾದರಾಯಣರ (ಶ್ರೀ ವೇದವ್ಯಾಸರ) ಶಿಷ್ಯರಾದ ಜೈಮುನಿಗಳಿಂದ ಪ್ರಣೀತವಾಗಿದ್ದರೂ ಸಹ, ಅದು ಸಮಗ್ರ ವೇದಾರ್ಥ ನಿರ್ಣಯಕ್ಕಾಗಿ ಪ್ರವೃತ್ತವಾದುದಲ್ಲ. ಜೈಮುನಿಗಳು ತಮ್ಮ ಸೂತ್ರಗಳಲ್ಲಿ ಧರ್ಮಾಧರ್ಮ–ವಿಹಿತಕರ್ಮಾನುಷ್ಠಾನದ ಬಗೆಗೆ ಸರಿಯಾದ ಅರ್ಥಗಳನ್ನು ಪ್ರತಿಪಾದಿಸಿದ್ದರೂ ಸಹ, ಅಪರ ಅನರ್ಥಕಾರಿ ವ್ಯಾಖ್ಯಾನಗಳಿಂದಾಗಿ ಈ ದರ್ಶನವು ಜಗತ್ತಿನಲ್ಲಿ ತನ್ನ ನಿಜವಾದ ಪ್ರಕಾಶವನ್ನು ಬೀರಿಲ್ಲ. ಬಾದರಾಯಣ ಮಹರ್ಷಿಗಳ ಬ್ರಹ್ಮಮೀಮಾಂಸಾ ಶಾಸ್ತ್ರವೇ ಷಡ್ದರ್ಶನಗಳಲ್ಲಿ ಕೊನೆಯದು ಹಾಗೂ ಅದೇ ಅಂತಿಮ ಸಿದ್ಧಾಂತವಾಗಿದೆ.

## ಶ್ರೀ ಬಾದರಾಯಣರ ಬ್ರಹ್ಮಮೀಮಾಂಸಾ

ಕೃತಯುಗದಲ್ಲಿ ನಾರಾಯಣರೂಪೀ ಪರಮಾತ್ಮನಿಂದ ಉಪದೇಶಿಸಲ್ಪಟ್ಟ ತತ್ತ್ವಜ್ಞಾನವು ಕಾಲಗತಿಸಿದಂತೆ ಅನೇಕ ದರ್ಶನಗಳ ವಿಪರೀತ ಬೋಧನೆಗಳಿಂದಾಗಿ ಹಾಗೂ ಗೌತಮ ಮಹರ್ಷಿಗಳ ಶಾಪದಿಂದಾಗಿ ನಾಶವನ್ನು ಹೊಂದುತ್ತಿರಲು. ಶ್ರೀಮನ್ನಾರಾಯಣನೇ ಪುನಃ ದ್ವಾಪರದ ಅಂತ್ಯಭಾಗದಲ್ಲಿ ವ್ಯಾಸರೂಪದಿಂದ ಅವತರಿಸಿ. ವೇದವಿಭಾಗ ಮಾಡಿ. ಅಷ್ಟಾದಶ ಪುರಾಣ–ಉಪಪುರಾಣ–ಭಾಗವತ–ಮಹಾಭಾರತ–ಬ್ರಹ್ಮಸೂತ್ರಗಳನ್ನು ರಚನೆಮಾಡಿ. ಭೂಮಿಯಲ್ಲಿ ಸರಿಯಾದ ತತ್ತ್ವಜ್ಞಾನವನ್ನು ಸಂಸ್ಥಾಪನೆ ಮಾಡಿದನೆಂದು ಸ್ಕಾಂದಪುರಾಣ ವಚನವು ಸಾರುತ್ತದೆ.

> "ನಾರಾಯಣಾದ್ವಿನಿಷ್ಪನ್ನಂ ಜ್ಞಾನಂ ಕೃತಯುಗೇ ಸ್ಥಿತಮ್ ।
> ಕಿಂಚಿತ್ತದನ್ಯಥಾಜಾತಂ ತ್ರೇತಾಯಾಂ ದ್ವಾಪರೇಽಖಿಲಮ್ ।
> ..............................................................
> ಗೌತಮಸ್ಯ ಋಷೇಃ ಶಾಪಾಜ್ಜ್ಞಾನೇತ್ವಜ್ಞಾನತಾಂ ಗತೇ ।
> ..............................................................
> ಚಕಾರ ಬ್ರಹ್ಮಸೂತ್ರಾಣಿ..............................
> ಜ್ಞಾನಂ ಸಂಸ್ಥಾಪ್ಯ ಭಗವಾನ್ ಕ್ರೀಡತೇ ಪುರುಷೋತ್ತಮಃ ॥"

ಅನಂತವಾದ ವೇದಾರ್ಥವನ್ನರಿಯಲು, ಇತಿ ಕರ್ತವ್ಯತಾರೂಪವಾದ ನ್ಯಾಯ ಗ್ರಥನಾತ್ಮಕವಾದ ಬ್ರಹ್ಮಸೂತ್ರಗಳನ್ನು ಬಾದರಾಯಣರು ರಚನೆಮಾಡಿ. ಅವುಗಳಲ್ಲಿ ಪರಮಾತ್ಮ–ಜೀವ–ಜಗತ್ತಿನ ಯಥಾರ್ಥ ಸ್ವರೂಪವನ್ನು ವಿವರಿಸಿ. ಮುಕ್ತಿಮಾರ್ಗದ ಒಂದೊಂದು ಉಪಾಯವನ್ನು ಕೂಲಂಕುಷವಾಗಿ ಚರ್ಚಿಸಿರು

ವದು. ಇದೇ ಮಾನವನಿಗೆ ನಿತ್ಯ–ನಿರಂತರ ದುಃಖ ಮಿಶ್ರವಲ್ಲದ ಸುಖಾತ್ಮಕ ಮೋಕ್ಷವನ್ನೀಯುವ ಶ್ರೇಷ್ಠ ದರ್ಶನವೆಂದು ಪ್ರಸಿದ್ಧವಾಗಿರುವದು.

ವೇದಗಳ ಮುಖ್ಯ ಉದ್ದೇಶವೆಂದರೆ ಜೀವಿಗಳ ದುಃಖವನ್ನು ದೂರ ಮಾಡುವದು. "ಅದುಃಖಮೀತರತ್ಸರ್ವಂ ಜೀವಾ ಏವತು ದುಃಖಿನಃ। ತೇಷಾಂ ದುಃಖ ಪ್ರಹಾಣಾಯ ಶ್ರುತಿರೇಷ ಪ್ರವರ್ತತೆ॥" ಎಂಬ ಉಕ್ತಿಯಂತೆ ಈ ಶ್ರುತಿಗಳು ಜೀವನ ದುಃಖನಾಶನೋಪಾಯವನ್ನು ಬೋಧಿಸಿರುವವು. ದುಃಖ ನಾಶನಕ್ಕೆ ಶ್ರೇಷ್ಠ ಉಪಾಯವೆಂದರೆ ನಾರಾಯಣ, ನಮಗೆ ದುಃಖ ನಾಶವಾಗಲು ಆತನ ಅನುಗ್ರಹ–ಪ್ರಸಾದಗಳು ಅಗತ್ಯ. ಆದ್ದರಿಂದ ವೇದಗಳೂ—

"ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಂ।
ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರಪಿ॥
ಸರ್ವೇಷಾಮಪಿವೇದಾನಾಮಿತಿಹಾಸ ಪುರಾಣಯೋಃ।
ಪ್ರಮಾಣಾನಾಂಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೆ॥"

"ಶ್ರೀಮನ್ನಾರಾಯಣನೇ ಸರ್ವೋತ್ತಮನು—ಎಲ್ಲರಿಗಿಂತಲೂ ಶ್ರೇಷ್ಠನು. ಎಲ್ಲರಿಗೂ ನಿಯಾಮಕನು. ಅವನೇ ಸರ್ವಜ್ಞನು. ಈ ಜಗತ್ತಿನ ಉತ್ಪತ್ತಿ-ಸ್ಥಿತಿ-ಸಂಹಾರ-ನಿಯಮನಾದಿ ಸರ್ವವನ್ನೂ ನಿಯಂತ್ರಿಸುವವನು. ಆದುದರಿಂದ ವಿಷ್ಣುವಿನ ಸರ್ವೋತ್ತಮತ್ವ ಸ್ಥಾಪನೆಯಲ್ಲಿಯೇ ಸಕಲ ವೇದಗಳ ತಾತ್ಪರ್ಯ"ವೆಂದು ಸಾಧಿಸುವವು. ಅದರಂತೆ ಇತಿಹಾಸ-ಪುರಾಣಗಳ ವಿಷಯವೂ ಸಹ ಸಕಲ ಪ್ರಮಾಣಗಳಿಂದ ನಿರ್ಣೀತವಾದ ವಿಷ್ಣುವಿನ ಸರ್ವೋತ್ತಮತ್ವವೇ ಆಗಿರುವದು.

ಬ್ರಹ್ಮ ಎಂದರೆ ವೇದ ಅಥವಾ ವೇದಾರ್ಥಭೂತವಾದ ಪರಬ್ರಹ್ಮ. ವೇದಾರ್ಥವನ್ನು ಅಥವಾ ಪರಬ್ರಹ್ಮನ ಸ್ವರೂಪವನ್ನು ನಿರ್ಣಯಮಾಡುವ ಶಾಸ್ತ್ರಕ್ಕೆ 'ಬ್ರಹ್ಮಮೀಮಾಂಸಾ ಶಾಸ್ತ್ರ'ವೆಂದು ಅರ್ಥವಾಗುವದು. ಆದುದರಿಂದ ವೇದ-ಇತಿಹಾಸ-ಪುರಾಣಗಳಿಂದ ಪ್ರತಿಪಾದ್ಯವಾದ ಪರಬ್ರಹ್ಮನ ಯಥಾರ್ಥಸ್ವರೂಪ ನಿರ್ಣಯವಾಗುವದು ಬಾದರಾಯಣರ ಬ್ರಹ್ಮಮೀಮಾಂಸಾ ಶಾಸ್ತ್ರದಿಂದ ಮಾತ್ರಸಾಧ್ಯ.

**"ಸರ್ವೋಪನಿಷದಾಮರ್ಥಂ ನಿರ್ಣೇತುಂ ಬಾದರಾಯಣಃ।**
**ಚಕಾರ ಬ್ರಹ್ಮಸೂತ್ರಾಣಿ।"..................**

ಸಂಪರ್ಣವಾಗಿ ಪರಬ್ರಹ್ಮನನ್ನು ಬೋಧಿಸುವ ಶಾಸ್ತ್ರಗಳೇ ಉತ್ತಮ ಶಾಸ್ತ್ರಗಳೆಂಬ ಪ್ರಸಿದ್ಧಿ. ಅವರಲ್ಲಿಯೂ ತಾನು ಪರಬ್ರಹ್ಮನ ಸ್ವರೂಪವನ್ನು ನಿರ್ಣಯಿಸುವ ಜ್ಞಾನವನ್ನು ಹುಟ್ಟಿಸಿ. ತನ್ನಿಂದ ಭಿನ್ನವಾದ ವೇದಾದಿ ಇತರ ಶಾಸ್ತ್ರಗಳಿಗೂ ಸಹ ಪರಬ್ರಹ್ಮನನ್ನು ಬೋಧಿಸುವ ಶಕ್ತಿಯನ್ನು ತಂದು ಕೊಡುವ ಶ್ರೇಷ್ಠ ಶಾಸ್ತ್ರವೆಂದರೆ ಬಾದರಾಯಣರ ಬ್ರಹ್ಮಮೀಮಾಂಸಾ ಶಾಸ್ತ್ರ.

ಶ್ರೀ ಬಾದರಾಯಣರು ಚತುರಧ್ಯಾಯಗಳಿಂದ ಯುಕ್ತವಾಗಿರುವ ತಮ್ಮ ಬ್ರಹ್ಮಮೀಮಾಂಸಾ ಶಾಸ್ತ್ರದ ಪ್ರಥಮಾಧ್ಯಾಯದಲ್ಲಿ ಸಕಲ ಸ್ವರವರ್ಣಪದಾತ್ಮಕ ವೈದಿಕ ಶಬ್ದಗಳು ಪರಮಾತ್ಮ ವಾಚಕಗಳೆಂದು ಸಮರ್ಥಿಸುವದರ ಮೂಲಕ ಪರಬ್ರಹ್ಮನ ಗುಣಪರಿಪೂರ್ಣತ್ವವನ್ನು ಸಾಧಿಸಿರುವರು ವಿಷ್ಣು (ಪರಬ್ರಹ್ಮನು) ಸರ್ವೋತ್ತಮನಲ್ಲ. ಅವನು ಸೃಷ್ಟಿಕರ್ತನಲ್ಲವೆಂಬ ಶಂಕೆಯ ಪರಿಹಾರಕ್ಕಾಗಿ. ದ್ವಿತೀಯಾಧ್ಯಾಯದಲ್ಲಿ ಸಕಲ ದರ್ಶನಗಳನ್ನೂ ವಿಮರ್ಶಿಸಿ. ಪರಮಾತ್ಮನ ಗುಣಪರಿಪೂರ್ಣತ್ವವನ್ನು ಸ್ಥಿರೀಕರಿಸಿದ್ದಾರೆ. ಗುಣಪರಿಪೂರ್ಣತ್ವ ವಿಷಯದಲ್ಲಿ ವಿವಾದವಿಲ್ಲದ ಬಳಿಕ, ಅಂಥ ಪರಮಾತ್ಮನನ್ನು ಪ್ರತ್ಯಕ್ಷೀಕರಿಸಿ ಕೊಳ್ಳುವ ಹೊಂದುವ ಉಪಾಯವನ್ನು ತೃತೀಯಾಧ್ಯಾಯದಲ್ಲಿ ನಿರೂಪಿಸಿ. ಪರಮಾತ್ಮನ ಸಾಕ್ಷಾತ್ಕಾರದಿಂದ ದೊರೆಯುವ ಮುಕ್ತಿಯ ಸ್ವರೂಪವನ್ನು ಚತುರ್ಥಾಧ್ಯಾಯದಲ್ಲಿ ವರ್ಣಿಸಿರುವರು, ಈ ಚತುರಧ್ಯಾಯ ಯುಕ್ತವಾದ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಜೀವನದಲ್ಲಿ ಅಳವಡಿಸಿಕೊಂಡವನಿಗೆ ಬ್ರಹ್ಮ ಪ್ರಾಪ್ತಿಯಾಗುವವರಲ್ಲಿ ಯಾವ ಸಂದೇಹವೂ ಇಲ್ಲ. ಅಂತಹ ಜೀವನು " ನ ಸ ಭಯೋಽಭಿಜಾಯತೆ ", " ನ ಸ ಪುನರಾವರ್ತತೆ ", "ಸೋಽಶ್ನುತೇ ಸರ್ವಾನ್‌ಕಾಮಾನ್ " ಎಂಬ ವೇದವಾಕ್ಯಗಳಲ್ಲಿಯೂ, " ಓಂ ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್ ಓಂ " ಎಂಬ ಸೂತ್ರದಲ್ಲಿಯೂ ಹೇಳಿದಂತೆ. ದು:ಖಮಿಶ್ರವಲ್ಲದ ನೈಜಸುಖವನ್ನು ಅನುಭವಿಸುತ್ತ, ವೈಕುಂಠಾದಿಲೋಕಗಳಲ್ಲಿ ವಾಸಮಾಡುವನು : ಪುನಃ ಈ ಸಂಸಾರಕ್ಕೆ ಎಂದಿಗೂ ಹಿಂತಿರುಗುವದಿಲ್ಲ.

## ಬ್ರಹ್ಮಸೂತ್ರಗಳು ಹಾಗೂ ಬ್ರಹ್ಮಸೂತ್ರ ಭಾಷ್ಯಗಳು

ಶ್ರೀ ಬಾದರಾಯಣರು ಅತ್ಯಂತ ಗಹನ-ಗಂಭೀರವಾದ, ವೇದಾರ್ಥ, ನಿರ್ಣಾಯಕವಾದ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಸೂತ್ರಗಳ ರೂಪದಲ್ಲಿ ನಿಬಂಧನ ಮಾಡಿರುವರು. ಅಪಶಬ್ದ—ವ್ಯರ್ಥಾಕ್ಷರಗಳಿಂದ್ದ ರಹಿತವಾಗಿ,

ಸ್ಫುಟವಾಗಿ ಸಂದೇಹಕ್ಕೆ ಅವಕಾಶವನ್ನೀಡುವಂತೆ, ವಿವಕ್ಷಿತ ವಿಶಿಷ್ಟಾರ್ಥ ವರ್ಣನೆಗೆ ಉಪಯುಕ್ತವಾದ ಹಿತ–ಮಿತ ಅಕ್ಷರಗಳಿಂದೊಡಗೂಡಿದವುಗಳನ್ನು ಸೂತ್ರಗಳೆಂದು ಪರಿಗಣಿಸುವರು,

ಅಲ್ಪಾಕ್ಷರಮಸಂಧಿಗ್ಧಂ ಸಾರವದ್ವಿಶ್ವತೋಮುಖಮ್ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥

ಇಂತಹ ಸೂತ್ರ ಲಕ್ಷಣವು ಮುಖ್ಯವಾಗಿ ಬ್ರಹ್ಮಸೂತ್ರಗಳಲ್ಲಿ ಕಂಡು ಬರುವದು. ಸೂತ್ರ ಪದದಿಂದ ಬ್ರಹ್ಮಸೂತ್ರಗಳೇ ಮುಖ್ಯ ವಾಚ್ಯಗಳಾಗಿರುವುದರಿಂದ,

“ನಿರ್ವಿಶೇಷಿತ ಸೂತ್ರತ್ವಂ ಬ್ರಹ್ಮಸೂತ್ರಸ್ಯ ಚಾಪ್ಯತಃ ।
..................................................................
ಸವಿಶೇಷಣ ಸೂತ್ರಾಣಿ ಹ್ಯಪರಾಣಿ ವಿದೋ ವಿದುಃ ।”

‘ಸೂತ್ರ’ವೆಂಬ ಯಾವ ವಿಶೇಷಣವೂ ಇಲ್ಲದ ಪದದಿಂದಲೇ ಇವುಗಳನ್ನು ಕರೆಯುವುದು ರೂಢಿಯಲ್ಲಿದೆ.

ಇಂತಹ ಭಾವಗಂಭೀರವಾದ ಸೂತ್ರಗಳು ತತ್ವ ಜಿಜ್ಞಾಸುಗಳಿಗೆ ಸುಲಭದಲ್ಲಿ ಅರ್ಥವಾಗದಿರುವದರ ಕಾರಣ, ಸೂತ್ರಾರ್ಥವನ್ನು ವಿವರಿಸಲು ಅನೇಕ ವ್ಯಾಖ್ಯಾನಗಳು ಪ್ರವೃತ್ತವಾದವು. ಇವು ಸೂತ್ರಗಳಿಗೆ ಅಸಾಧಾರಣ ವ್ಯಾಖ್ಯಾನಗಳಾದ್ದರಿಂದ ‘ಭಾಷ್ಯ’ಗಳೆಂದು ಪ್ರಸಿದ್ಧವಾಗಿವೆ. “ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಕಾರಿಭಿಃ । ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ” ಎಂಬ ಭಾಷ್ಯಲಕ್ಷಣೋಕ್ತಿಯಂತೆ, ಭಾಷ್ಯದಲ್ಲಿ ಸೂತ್ರಾನುಸಾರಿಯಾದ ಪದಗಳಿಂದ ಸೂತ್ರಾರ್ಥವು ವರ್ಣಿತವಾಗಿರಬೇಕು ಹಾಗೂ ಸ್ವಪದಗಳೂ ವರ್ಣಿತವಾಗಿರಬೇಕು.

ಶ್ರೀ ಬಾದರಾಯಣ ಬ್ರಹ್ಮಸೂತ್ರಗಳಿಗೆ ಒಟ್ಟು ಇಪತ್ತೆರಡು ಭಾಷ್ಯಗಳು ಇರುವವೆಂದು ಪ್ರಸಿದ್ಧಿಯಿದೆ, ‘ಭಾರತೀವಿಜಯ–ಸಚ್ಚಿದಾನಂದ–ಬ್ರಹ್ಮಘೋಷ–ಶತಾನಂದ–ಉದ್ವರ್ತ–ವಿಜಯ – ರುದ್ರಭಟ್ಟ – ವಾಮನ–ಶಂಕರ–ಭತೃಪ್ರಪಂಚ–ದ್ರವಿಡ–ಬ್ರಹ್ಮದತ್ತ–ಭಾಸ್ಕರ–ಪಿಶಾಚ–ವೃತ್ತಿಕಾರ–ವಿಜಯಭಟ್ಟ–ವಿಷ್ಣುಕ್ರಾಂತ–ವಾದೀಂದ್ರ–ಮಾಧವದಾಸ– ಯಾದವಪ್ರಕಾಶ ರಾಮಾನುಜ–ಪೂರ್ಣಪ್ರಜ್ಞ (ಮಧ್ವ) ಇವು ಭಾಷ್ಯಕಾರರ ಹೆಸರುಗಳು, ಈ ಭಾಷ್ಯಕಾರರು ರಚಿಸಿದ ಭಾಷ್ಯಗಳಲ್ಲಿ ಈಗ ಶಂಕರಭಾಷ್ಯವೂ. ರಾಮಾನುಜ ಭಾಷ್ಯವೂ ಹಾಗೂ ಪೂರ್ಣಪ್ರಜ್ಞ ಭಾಷ್ಯವೂ ಈಗ ಉಪಲಬ್ಧವಿದ್ದು,

ಪ್ರಚಾರದಲ್ಲಿದ್ದ, ಅನುಯಾಯಿಗಳಿಲ್ಲದ ಲೆಕ್ಕವಿಲ್ಲದಷ್ಟು (ಇನ್ನುಳಿದ ಹಲವು ಭಾಷ್ಯಕಾರರ ಹೆಸರುಗಳು ಮಾತ್ರ ಖಂಡನ—ಮಂಡನ ಪ್ರಸಂಗಗಳಲ್ಲಿ ಕೇಳಿಬರುವವು), ಸೂತ್ರಗಾಂಭೀರ್ಯ ಹಾಗೂ ಇನ್ನಿತರ ಹಲವಾರು ಕಾರಣಗಳಿಂದಾಗಿ ಈ ಭಾಷ್ಯಕಾರರುಗಳಲ್ಲಿಯೂ ನವ ಭಿನ್ನಾಭಿಪ್ರಾಯ—ವ್ಯಾಖ್ಯಾನ ವೈಚಿತ್ರ್ಯಗಳಿರುವವು.

ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರಗಳಿಗೆ ಅದ್ವೈತಪರ ಭಾಷ್ಯ ಬರೆದು, ಅದರಲ್ಲಿ "ಬ್ರಹ್ಮವೊಂದೇ ಪಾರಮಾರ್ಥಿಕ ಸತ್ಯವು, ಬ್ರಹ್ಮವ್ಯತಿರಿಕ್ತವಾದ ಸಮಸ್ತ ಪದಾರ್ಥವು ಮಾಯಾಮಯವಾದ್ದರಿಂದ ಮಿಥ್ಯಾಭೂತವಾಗಿದ. ಒಬ್ಬನೇ ಬ್ರಹ್ಮನು ಉಪಾಧಿಗಳಲ್ಲಿ ಪ್ರತಿಬಿಂಬಿಸುವನಾದ್ದರಿಂದ ಜೀವೇಶಭಾವವನ್ನು ಹೊಂದಿರುತ್ತಾನೆ. ಈ ಸಂಸಾರವಲ್ಲವೂ ಜೀವನ ಭ್ರಾಂತಿ ಈ ಭ್ರಾಂತಿ ನಿವೃತ್ತಿಯೇ ಜೀವನಿಗೆ ಮುಕ್ತಿಯು. ಜೀವ ಬ್ರಹ್ಮೈಕ್ಯವನ್ನು ಬೋಧಿಸುವ ವೇದಾಂತ ವಾಕ್ಯ ಶ್ರವಣದಿಂದ ಈ ಭ್ರಮವು ನಿವೃತ್ತವಾಗುವದು". ಎಂಬುದಾಗಿ ಬೋಧಿಸಿರುವರು.

ಶ್ರೀ ರಾಮಾನುಜಾಚಾರ್ಯರು ಶಂಕರರು ಬೋಧಿಸಿದ ತತ್ವಗಳನ್ನು ನಿರಾಕರಿಸಿ, ಬ್ರಹ್ಮಸೂತ್ರಗಳಿಗೆ ತಮ್ಮದೇ ಆದ 'ವಿಶಿಷ್ಟಾದ್ವೈತ'ಪರ ಭಾಷ್ಯವನ್ನು ರಚನೆಮಾಡಿ. "ಪ್ರಪಂಚವು ಸತ್ಯವಾದದ್ದು. ಲಕ್ಷ್ಮೀಪತಿಯು ಈ ಪ್ರಪಂಚದ ಅಧಿಪತಿ. ಅವನೇ ಪರಬ್ರಹ್ಮನು. ಎಲ್ಲ ಚರಾಚರ ವಸ್ತುಗಳು ಆ ಪರಬ್ರಹ್ಮನ ಶರೀರವಾಗಿ ಧರಿಸಲ್ಪಟ್ಟಿವೆ. ಚೇತನಗಳು ಪರಮಾತ್ಮನಿಗಿಂತ ಭಿನ್ನವಾಗಿರುವವು ಪರಮಾತ್ಮನ ನಿಯಮಗಳನ್ನು ಉಲ್ಲಂಘನೆಮಾಡಿದ ಪ್ರಯುಕ್ತ ಅದಕ್ಕೆ ಶಿಕ್ಷಾರೂಪವಾಗಿ ಜನನ-ಮರಣ ರೂಪವಾದ ಈ ಸಂಸಾರ ಪ್ರಾಪ್ತಿಯಾಗುವದು. ಆದರೆ ಇದು ಸತ್ಯವೇ ಆಗಿರುವದು, ಭಕ್ತಿ ಶ್ಲೋಕ ಮುಂತಾದ ಉಪಾಯಗಳಿಂದ ವೈಕುಂಠಸ್ಥಾನದಲ್ಲಿ ಮುಕ್ತಿಯು ದೊರೆಯುವದು. ಬ್ರಹ್ಮಾನುಭವವೇ ಆ ಪರಮಪದ ಪ್ರಾಪ್ತಿ" ಎಂದು ಉಪದೇಶಿಸಿರುವರು,

ಅನಂತರದ ಶ್ರೀ ಮಧ್ವಾಚಾರ್ಯರು ತಮಗಿಂತಲೂ ಪೂರ್ವದಲ್ಲಿ ಪ್ರಚಾರದಲ್ಲಿದ್ದ ಎಲ್ಲ ಭಾಷ್ಯಗಳನ್ನು ಪರಾಮರ್ಶಿಸಿ, ವೈದಿಕ ಮೂಲಭೂತ ಸಮಸ್ಯೆಗಳಿಗೆ ಯಾವುದರಲ್ಲಿಯೂ ಪರಿಹಾರವಿರದೆ ಇದ್ದುದನ್ನು, ಹಾಗೂ ಬಾದರಾಯಣರ ಬ್ರಹ್ಮ ಸೂತ್ರಗಳಿಗೆ ಮತ್ತು ಶ್ರುತಿ-ಸ್ಮೃತಿಗಳಿಗೆ ಸಮರ್ಪಕವಾದ ಅರ್ಥವನ್ನು ತೋರಿಸಲು ಅಸಮರ್ಥವಾಗಿರುವದನ್ನು ಮನಗಂಡು. ವಿಷ್ಣು ಸರ್ವೋತ್ತಮತ್ವಪರವಾದ ದ್ವೈತ ಭಾಷ್ಯವನ್ನು ರಚಿಸಿದರು,

ಅವರು ಅನ್ಯರಿಂದ ಪ್ರವರ್ತಿತವಾದ ಸಮಯಗಳನ್ನು ನಿರಾಕರಿಸುವದಕ್ಕಿಂತ ಪೂರ್ವದಲ್ಲಿ ಬೇರ-ಬೇರ ಸಮಯಗಳಲ್ಲಿಯ ಭಿನ್ನಾಭಿಪ್ರಾಯಗಳಿಗೆ ಮತಪ್ರವರ್ತಕರಲ್ಲಿರುವ ಭ್ರಾಂತಿಯೇ ಮೂಲಕಾರಣವೆಂಬುದನ್ನು ಬಹಿರಂಗಪಡಿಸಿದರು,

"ದೌರ್ಬಲ್ಯಾತ್ ಶುದ್ಧ ಬುದ್ಧೀನಾಂ ಬಾಹುಲ್ಯಾದಲ್ಪವೇದಿನಾಂ ।
ದುರಾಗ್ರಹ ಗ್ರಹೀತತ್ವಾದ್ವ್ಯೇತರ್ಣಂತೇ ಸಮಯಾಃ ಸದಾ ॥"

ಸರಿಯಾದ ತತ್ತ್ವಜ್ಞಾನವನ್ನು ತಿಳಿದು ಸಾತ್ವಿಕ ಮನೋವೃತ್ತಿಯುಳ್ಳವರು ಈ ಜಗತ್ತಿನಲ್ಲಿ ಅತ್ಯಂತ ವಿರಳ. ಅಲ್ಪಜ್ಞಾನವುಳ್ಳವರೇ ಬಹು ಸಂಖ್ಯಾಕರು. ಅವರಲ್ಲಿಯೂ ಪರರ ತತ್ವಗಳನ್ನು ಒಪ್ಪಿಕೊಳ್ಳದೇ ತಮ್ಮ ತತ್ವಗಳನ್ನೇ ಸಾಧಿಸಬೇಕೆಂಬ ದುರಾಗ್ರಹ ಗ್ರಹೀತರಾದವರು ಅನೇಕರು ಇವೆಲ್ಲವುಗಳ ಪ್ರಭಾವದಿಂದಾಗಿ ಜಗತ್ತಿನಲ್ಲಿ ಅನೇಕ ತತ್ವಗಳು ಬೆಳೆದು ಬಂದಿದೆ.

ತಥಾಪಿ ಶುದ್ಧ ಬುದ್ಧೀನಾಂ ಈಶಾನುಗ್ರಹವೇದಿನಾಂ ।
ಸುಮುಕ್ತ್ಯಯಃ ಸ್ತುಪೋ ಹನ್ಯುಃ ಆಗಮಾನುಗತಾಃ ಸದಾ

ಅವರೂ ಸಹ ಶುದ್ಧಬುದ್ಧಿಯುಳ್ಳ ಈಶಾನುಗ್ರಹಕ್ಕೆ ಪಾತ್ರರಾದ ಜನರ ಅಜ್ಞಾನವನ್ನು ಆಗಮಾನುಗತವಾದ ಸುಯುಕ್ತಿಗಳು ನಾಶಪಡಿಸವವು. ಇದೇ ದೃಷ್ಟಿಯಿಂದಲೇ ಶ್ರೀ ಬಾದರಾಯಣರು ಯುಕ್ತಿಯನ್ನು ತೋರಿಸುವ ಬ್ರಹ್ಮ ಸೂತ್ರಗಳನ್ನು ರಚಿಸಿದರು. ಶ್ರೀ ಮಧ್ವಾಚಾರ್ಯರು ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಸಕಲ ಶಾಸ್ತ್ರಗಳನ್ನು ಸರಿಯಾಗಿ ಆಲೋಚನ ಮಾಡಿ ದ್ವೈತಸಿದ್ಧಾಂತದ ತತ್ವಗಳನ್ನು ಜನತೆಗೆ ಉಪದೇಶಿಸಿದರು.

ಶ್ರೀಮಧ್ವಾಚಾರ್ಯರು ರಚಿಸಿದ ಬ್ರಹ್ಮಸೂತ್ರ ಭಾಷ್ಯದ ಉಪದೇಶದ ಸಾರವು ಹೀಗಿದೆ— "ವಿಷ್ಣು ಸರ್ವೋತ್ತಮನು, ವಾಯು ಜೀವೋತ್ತಮನು, ಜಗತ್ತು ಸತ್ಯವಾದುದು. ಪರಮಾತ್ಮ—ಜೀವ—ಜಡರಲ್ಲಿಯ ಭೇದ ಪಂಚಕವೂ ಮತ್ತು ಜೀವತಾರತಮ್ಯವೂ ಸತ್ಯವಾದುದು. ಬ್ರಹ್ಮನು ಶಾಸ್ತ್ರದಿಂದಲೇ ತಿಳಿಯಲು ಯೋಗ್ಯನಾದವನು. ಎಲ್ಲ ವೇದಗಳೂ ಪಂಚರಾತ್ರ—ಮಹಾಭಾರತ —ಮೂಲರಾಮಾಯಣಾದಿಗಳೂ, ಇವುಗಳಿಗೆ ಅನುಕೂಲವಾದ ಗ್ರಂಥಗಳೂ ಶಾಸ್ತ್ರವೆಂದು ಪರಿಗಣಿಸಲ್ಪಡುವವು. ಸಮಗ್ರ ಶಾಸ್ತ್ರವು ಪರಮಾತ್ಮನನ್ನು ಮುಖ್ಯವೃತ್ತಿಯಿಂದ ಪ್ರತಿಪಾದಿಸುವದು. ರಮಾಬ್ರಹ್ಮಾದಿ ಸಕಲ ಜೀವ ಜಡಾತ್ಮಕ ಪ್ರಪಂಚವು ಪರಮಾತ್ಮನ ಅಧೀನವಾಗಿದ್ದು, ಈ ಜಗತ್ತಿಗೆ ಸೃಷ್ಟಿ ಸ್ಥಿತಿಸಂಹಾರ ನಿಯಮನಜ್ಞಾನಾಜ್ಞಾನ ಬಂಧಮೋಕ್ಷಪ್ರದನು ಪರಮಾತ್ಮನೇ.

ಅನಾದಿಯಾದ ಕರ್ಮದಿಂದ ಜೀವರಿಗೆ ಸಂಸಾರ ಪ್ರಾಪ್ತಿಯಾಗುವದು. ಸಂಸಾರ ಬಂಧ ನಿವೃತ್ತಿಯೇ ಮುಕ್ತಿಯು. ಸಕಲ ಜೀವರಾಶಿಗಳಲ್ಲಿ ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಮತ್ತು ತಮೋಯೋಗ್ಯರೆಂದು ತ್ರೈವಿಧ್ಯವಿದೆ. ನೈಜ ಸುಖಾನುಭವರೂಪವಾದ, ಸಂಸಾರಬಂಧ ನಿವೃತ್ತಿರೂಪವಾದ ಈ ಮುಕ್ತಿಯು ಪರಮಾತ್ಮನ ಅನುಗ್ರಹದಿಂದ ಮಾತ್ರ ಸಾಧ್ಯ. ಪರಮಾತ್ಮನ ಅನುಗ್ರಹವು ಶ್ರವಣ-ಮನನ-ನಿದಿಧ್ಯಾಸನಗಳಿಂದ ಹರಿ–ಗುರುಭಕ್ತಿಸಹಿತನಾದ ಶಮ-ದಮಾದಿಸಾಧನಗಳುಳ್ಳ ಅಧಿಕಾರಿಗೆ ಲಭಿಸುವದು. ಮುಕ್ತಿಯಲ್ಲಿ ಜೀವನ ಯೋಗ್ಯತೆಯನ್ನನುಸರಿಸಿ ಫಲತಾರತಮ್ಯವಿರುವದು. ಮುಕ್ತರಾದ ಜೀವರಿಗೆ ಪುನಃ ಸಂಸಾರಪ್ರಾಪ್ತಿ ಇರುವದಿಲ್ಲ. ಬ್ರಹ್ಮನು (ಪರಮಾತ್ಮನು) ಜಗತ್ತಿನ ಸೃಷ್ಟ್ಯಾದಿಕಾರಣನೂ, ಗುಣಪರಿಪೂರ್ಣನೂ, ಸಚ್ಚಿದಾನಂದ ಸ್ವರೂಪವುಳ್ಳವನೂ. ಸ್ವಗತಭೇದರಹಿತನೂ ಇವೇ ಮೊದಲಾದ ಅನಂತಕಲ್ಯಾಣಗುಣಾಕರನೂ ಆಗಿರುವನು ಈ ಎಲ್ಲ ಪ್ರಮೇಯಗಳೂ ಪ್ರತ್ಯಕ್ಷ ಅನುಮಾನ ಆಗಮ ಪ್ರಮಾಣದಿಂದ ಸಿದ್ಧಿಸುವವು.

## ಶ್ರೀ ಮಧ್ವಭಾಷ್ಯದ ಹಿರಿಮೆ

ಶ್ರೀ ಮಧ್ವಾಚಾರ್ಯರು ಬ್ರಹ್ಮಸೂತ್ರಭಾಷ್ಯಕಾರರ ಶ್ರೇಣಿಯಲ್ಲಿ ಕೊನೆಯವರಾದರೂ ಸಿದ್ಧಾಂತಪ್ರತಿಷ್ಠಾಪನಾಚಾರ್ಯರಲ್ಲಿ ಅವರನ್ನು ಪ್ರಥಮರೆಂದು ಪರಿಗಣಿಸಲಾಗುತ್ತಿದೆ, ಸೂತ್ರಕಾರರ ಸಾಕ್ಷಾತ್ ಶಿಷ್ಯರಾದ ಆಚಾರ್ಯರು ತಮ್ಮಲ್ಲಿಯ ಅಪ್ರತಿಹಿತ ಪಾಂಡಿತ್ಯ, ಅವರ್ಣನೀಯಪ್ರತಿಭೆ ಅನೇಕ ಶಾಸ್ತ್ರ ಭಾಷಾ ಜ್ಞಾನ. ಸ್ವಕಪೋಲಕಲ್ಪನೆಗೆ ಅವಕಾಶವನ್ನೀಯದೇ ಪ್ರಮಾಣಾನುಗುಣವಾಗಿ ಸಿದ್ಧಾಂತಸ್ಥಾಪಕಗುರಿ, ಇತರ ಭಾಷ್ಯಕಾರರಿಂದ ಅಶ್ರುತವಾದ ಅಸಂಖ್ಯಾತ ಅಪೂರ್ವ ಗ್ರಂಥಸಮಾಲೋಚನ ಚಾತುರ್ಯ. ತತ್ವನಿರ್ಣಾಯಕ ಬುದ್ಧಿವೈಶಿಷ್ಟ್ಯ ಇವುಗಳಿಂದಾಗಿ ಅವರು ರಚಿಸಿದ ಭಾಷ್ಯವು ಶ್ರೀ ಬಾದರಾಯಣರ ಬ್ರಹ್ಮಸೂತ್ರಗಳ ಇಂಗಿತವನ್ನು ಸ್ಪಷ್ಟೀಕರಿಸುವಲ್ಲಿ ಅತ್ಯಂತ ಸಮರ್ಥವಾಗಿವೆ. 'ಪೂರ್ಣಪ್ರಜ್ಞರು' ಹಾಗೂ 'ಆನಂದತೀರ್ಥ'ರೆಂದು ಪ್ರಸಿದ್ಧರಾದವರಿಂದ ಉಪದೇಶಿತವಾದ ತತ್ವಗಳಿಗೆ ವೇದದ ಆಧಾರ, ಸ್ಮೃತಿಯ ಬೆಂಬಲ. ಸೂತ್ರದ ಸಮ್ಮತಿ, ಪುರಾಣದ ಪುಷ್ಟಿ, ಗೀತೆಯ ಸಂವಾದ, ಇತಿಹಾಸದ ಅನುಮೊ ಹಾಗೂ ಲೌಕಿಕ ದೃಷ್ಟಾಂತ ಸಮರ್ಥನೆಗಳಿವೆಯೆಂಬುದು ಅವರ ಗ್ರಂಥಾವಲೋಕನದಿಂದ ಮನದಟ್ಟಾಗುವದು.

ಶ್ರೀ ಮಧ್ವಾಚಾರ್ಯರು ಜೀವೋತ್ತಮರಾದ ವಾಯುದೇವರ ಅವತಾರರು. ತ್ರೇತಾಯುಗದಲ್ಲಿ ಹನುಮಂತರಾಗಿ ಶ್ರೀ ರಾಮನ ಸೇವೆ ಮಾಡಿ. ದ್ವಾಪರಯುಗದಲ್ಲಿ ಭೀಮಸೇನರಾಗಿ ಶ್ರೀ ಕೃಷ್ಣನ ಅಜ್ಞಾನುಸಾರ ದುಷ್ಟ ಸಂರಕ್ಷಣ ಮಾಡಿ ಪ್ರಖ್ಯಾತರಾದ ಶ್ರೀ ವಾಯು ದೇವರೇ ಕಲಿಯುಗದಲ್ಲಿ ಶ್ರೀ ಮಧ್ವಾಚಾರ್ಯರಾಗಿ ಅವತರಿಸಿ ಶ್ರೀ ವೇದವ್ಯಾಸ ದೇವರಿಗೆ ಸಮ್ಮತವಾದ ದ್ವೈತ ಸಿದ್ಧಾಂತವನ್ನು. ಅವರ ಆಜ್ಞೆಯಂತೆ, ತಮ್ಮ ಭಾಷ್ಯಗಳಿಂದ ಪ್ರತಿಷ್ಠಾಪಿಸಿದರು. ತಮಗಿಂತಲೂ ಪೂರ್ವದಲ್ಲಿಯ ಇಪ್ಪತ್ತೊಂದು ಭಾಷ್ಯಗಳನ್ನು ಅವುಗಳಲ್ಲಿಯ ದೋಷೋದ್ಘಾಟನಪೂರ್ವಕ ನಿರಾಕರಿಸಿ, ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕವಾದ ದ್ವೈತ ಭಾಷ್ಯವನ್ನು ರಚಿಸಿದರೆಂದು ಅವರ ಮಹಿಮೆಯನ್ನು ಬಳಿತ್ಥಾ ಸೂಕ್ತವೂ, ಕೂರ್ಮ-ಸ್ಕಾಂದ-ವಾಯು-ಬ್ರಹ್ಮಪುರಾಣಗಳೂ, ಭವಿಷ್ಯತ್‌ಪರ್ವವೂ ಸಾರಿ ಹೇಳುವದು.

"ತ್ರಿಕೋಟಿಮೂರ್ತಿಸಂಯುಕ್ತಃ ತ್ರೇತಾಯಾಂ ರಾಕ್ಷಸಾಂತಕಃ ।
ಹನುಮಾನಿತಿ ವಿಖ್ಯಾತೋ ರಾಮಕಾರ್ಯಧುರಂಧರಃ ॥
ಸವಾಯುರ್ಭೀಮಸೇನೋಭೂತ್ ದ್ವಾಪರಾಂತೆ ಕುರುದ್ವಹ ।
ಕೃಷ್ಣಂಸಂಪೂಜಯಾಮಾಸ ಹತ್ವಾದುಯೋಧನಾದಿಕಾನ್ ॥
ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂತು ಕಲಾಯುಗೆ ।
ಯತಿರೂಪಧರೋವಾಯುಃ ಭವಿಷ್ಯತಿ ನ ಸಂಶಯಃ ॥"

ಇತಿ ಭವಿಷ್ಯತ್ಪರ್ವಣೀ

"ಕಾಪ್ಯಪೀತೆ ಮಧ್ಯಗೇಹೆ ನಿರ್ವಿಕಾರೋಽವ್ಯಜಾಯತ ।
ಏಕವಿಂಶತಿಕುಭಾಷ್ಯಂಚ ಪ್ರದುಷ್ಯಾಗಮ ತರ್ಕಂತ : ॥

.... ಸ್ಕಾಂದಪುರಾಣೆ

ಶ್ರೀ ಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಹೋದಾಗ ಅಲ್ಲಿ ಶ್ರೀ ವೇದವ್ಯಾಸರೇ ಆಚಾರ್ಯರಿಗೆ ಆಜ್ಞೆ ಮಾಡಿ. ಗ್ರಂಥಗಳನ್ನು ರಚಿಸುವುದರ ಮೂಲಕ ಸತ್ಸಿದ್ಧಾಂತವನ್ನು ಜಗತ್ತಿನಲ್ಲಿ ಸಂಸ್ಥಾಪಿಸಲು ಹೇಳಿದರೆಂದು ಆಚಾರ್ಯರ ಚರಿತ್ರೆಯಿಂದ ತಿಳಿದು ಬರುವುದು. ಆಚಾರ್ಯರೂ ಕೂಡ ತಮ್ಮ ಗ್ರಂಥದಲ್ಲಿ

ಆನಂದ ತೀರ್ಥಾಖ್ಯ ಮುನಿ: ಸಂಪೂರ್ಣ
ಪ್ರಜ್ಞಾಭಿದೋ ಗ್ರಂಥಮಿಮಂ ಚಕಾರ ।

ನಾರಾಯಣೇ ನಾಭಿಹಿತೋ ಬದರ್ಯಾಂ
ತಸ್ಯೈವ ಶಿಷ್ಯೋ ಜಗದೇಕ ಭರ್ತು: ॥ ಮಹಾಭಾರತ ತಾತ್ಪ
ರ್ಯನಿರ್ಣಯ 32-170

ವ್ಯಾಸಜ್ಞಯಾ ಭಾಷ್ಯವರಂ ವಿಧಾಯ
ಪೃಥಕ್ ಪೃಥಕ್ಚೋಪನಿಷತ್ಸು ಭಾಷ್ಯಂ। ಮ. ತಾ. ನಿ 32-175

..ವೇದವ್ಯಾಸದೇವರ ಆಜ್ಞೆಯಿಂದ ಬ್ರಹ್ಮಸೂತ್ರಭಾಷ್ಯವನ್ನು ರಚನೆ ಮಾಡಿ, ಉಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿ. ಇನ್ನೂ ಅನೇಕ ಗ್ರಂಥಗಳನ್ನು ರಚನೆಮಾಡಿ. ಗ್ರಂಥಶ್ರೇಷ್ಠವಾದ ಮಹಾಭಾರತತಾತ್ಪರ್ಯ ನಿರ್ಣಯವನ್ನು ಮಾಡಿರುವದಾಗಿ ಹೇಳಿರುವರು.

ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವ್ಯಾಖ್ಯಾನ ರೂಪವಾಗಿ ಶ್ರೀ ಮಧ್ವಾಚಾರ್ಯರು ಬ್ರಹ್ಮಸೂತ್ರ ಭಾಷ್ಯ ಅನುವ್ಯಾಖ್ಯಾನ'ನ್ಯಾಯವಿವರಣ' ಮತ್ತು ಅಣು ಭಾಷ್ಯಗಳೆಂಬ ನಾಲ್ಕು ಭಾಷ್ಯಗ್ರಂಥಗಳನ್ನು ರಚಿಸಿರುವರು, ಈ ನಾಲ್ಕು ಗ್ರಂಥಗಳಲ್ಲಿ ಆಚಾರ್ಯರವರಿಂದ ಬ್ರಹ್ಮಸೂತ್ರಗಳಿಗೆ ನಿರ್ಣಯ ವಾಕ್ಯಪ್ರದರ್ಶನ ಪೂರ್ವಕವಾಗಿ ನಿರ್ಣಯವಾಕ್ಯನಿರ್ಣಾಯಕತ್ವ ಪ್ರಕಾರವನ್ನು ಸಮರ್ಥಿಸಿರುವರು,

ಅನೇಕ ಅಪೂರ್ವ ಪ್ರಮಾಣ ಪುಂಜ ಪೂರಿತವಾಗಿ, ಸಕಲ ಸೂತ್ರ ಮುಖ್ಯಾರ್ಥ ವರ್ಣನ ಪರವಾದುದು -ಬ್ರಹ್ಮಸೂತ್ರಭಾಷ್ಯವು,

ಸಕಲ ಅಪವ್ಯಾಖ್ಯಾನ ನಿರಾಸಪೂರ್ವಕವಾಗಿ ಭಾಷ್ಯೋಕ್ತ ಅರ್ಥವನ್ನು ಸಮರ್ಥಿಸುವ ನಿಷ್ಕಲಂಕ ವ್ಯಾಖ್ಯಾ ಪ್ರವಾಹವು ಅನುವ್ಯಾಖ್ಯಾನವು,

ಬ್ರಹ್ಮಸೂತ್ರಗಳಿಗೆ ಅಭಿಮತವಾದ ಪೂರ್ವಪಕ್ಷ-ಸಿದ್ಧಾಂತ ನ್ಯಾಯ ಸಂಗ್ರಹವಾದ ಅತಿಗಂಭೀರವಾದ ಗ್ರಂಥವು ನ್ಯಾಯವಿವರಣವು.

ಸರ್ವಶಾಸ್ತ್ರಸಂಗ್ರಹರೂಪವಾದ. ಬಹ್ವರ್ಥಗರ್ಭಿತವಾದ, ಸರ್ವಶಾಸ್ತ್ರಪಠಣ ಫಲವನ್ನೀಯುವ ಅತಿಸಂಕ್ಷಿಪ್ತವಾದ ಸಿದ್ಧಾಂತದ ಸಂಗ್ರಹವು ಅಣುಭಾಷ್ಯವು

## ಅಣುಭಾಷ್ಯದ ವೈಶಿಷ್ಟ್ಯ

ಕೇವಲ ಮೂವತ್ತೆರಡು ಅನುಷ್ಟುಪ್ ಶ್ಲೋಕಗಳಿಂದ ಸಕಲ ಶಾಸ್ತ್ರಾರ್ಥಗಳೂ ಈ ಗ್ರಂಥದಲ್ಲಿ ನಿರೂಪಿತವಾಗಿ. ಅದು ಶಬ್ದಗಳಿಂದ ಸಂಕ್ಷಿಪ್ತವಾಗಿದ್ದರೂ ಅನಂತವಾದ ಅರ್ಥಗಳನ್ನು ಪ್ರಕಟಿಸುವುದು,

"॥ಅನಂತೋರ್ಥ ಪ್ರಕಟಿತಃ ತ್ಪಮಾಣಾ ಭಾಷ್ಯ ಸಂಗ್ರಹೇ॥"(ಸುಮಧ್ವ ವಿಜಯ) ದ್ವೈತಪದ್ಧತಿಯಿಂದ ಸೂತ್ರವ್ಯಾಖ್ಯಾನಗಳಿಗೆ ಅನುಕ್ರಮಣಿಕೆಯಂತಿದ್ದ ಈ ಸಂಕ್ಷಿಪ್ತ ಭಾಷ್ಯವು. ಬ್ರಹ್ಮಸೂತ್ರಭಾಷ್ಯದಲ್ಲಿದ್ದಂತೆಯೇ ನಾಲ್ಕು ಅಧ್ಯಾಯಗಳಿಂದ ಪ್ರಕಟಿತವಾಗಿದೆ. ಪ್ರತಿಅಧ್ಯಾಯದಲ್ಲಿಯೂ ಸೂತ್ರಭಾಷ್ಯ ಪ್ರಮೇಯಗಳೇ ಅತಿ ಸಂಗ್ರಹವಾಗಿ ನಿರೂಪಿತವಾಗಿವೆ, ಪ್ರಥಮಾಧ್ಯಾಯದಲ್ಲಿ ಸಮನ್ವಯೂಧ್ಯಾಯದ ಪ್ರಮೇಯಗಳು, ದ್ವಿತೀಯಾಧ್ಯಾಯದಲ್ಲಿ ಅವಿರೋಧಾಧ್ಯಾಯದ ಪ್ರಮೇಯಗಳು ತೃತೀಯೊಧ್ಯಾಯದಲ್ಲಿ ಸಾಧನಾಧ್ಯಾಯದ ಪ್ರಮೇಯಗಳೂ ಮತ್ತು ಚತುರ್ಥಾಧ್ಯಾಯದಲ್ಲಿ ಫಲಾಧ್ಯಾಯದ ಪ್ರಮೆಯಗಳೂ ವಿವೃತವಾಗಿವೆ. ಬ್ರಹ್ಮಸೂತ್ರಭಾಷ್ಯದಲ್ಲಿಯೆ ಈ ವಿಷಯಗಳು ವಿವರಿಸಲ್ಪಟ್ಟಿರುದ್ದವದರಿಂದ ಈ ಗ್ರಂಥಕ್ಕೆ ಗತಾರ್ಥತೆಯನ್ನು ಶಂಕಿಸಬಾರದು. ಶ್ರೀ ಶ್ರೀನಿವಾಸತೀರ್ಥರು ತಮ್ಮ ಅಣುಭಾಷ್ಯವ್ಯಾಖ್ಯಾನದಲ್ಲಿ ಈ ಗ್ರಂಥದ ಸಾರ್ಥಕತೆಯನ್ನೂ ಮತ್ತು ಶ್ರೀಮದಾಚಾರ್ದುರು ಅತಿಸಂಗ್ರಹವಾದ ಈ ಗ್ರಂಥ ರಚಿಸುವದರ ಕಾರಣವನ್ನೂ ಈ ರೀತಿಯಾಗಿ ವಿದರಿಸಿರುವರು

"ಮಧ್ವಾಚಾರ್ಯೈರೇವ ಸೂತ್ರವ್ಯಾಖ್ಯಾನಂ ಭಾಷ್ಯಾದೌ ಕೃತಮೇವ। ತತ್ಕಿಮರ್ಥೋಽಯಂ ಗ್ರಂಥಃ ! ಇತಿ ಚೇತ್ ಅತ್ರ ವದಂತಿ–ಕೇಚನ ಆಚಾರ್ಯಶಿಷ್ಯಾ: ಪ್ರತಿದಿನಂ ಭಾಷ್ಯ ಪಠನಶೀಲಾ: ತದ್ವ್ಯತಿರೇಕೇಣ ಕಿಮಪಿ ನ ಕುರ್ವಂತಿ। ತದನುಜಿಘೃಕ್ಷಯಾ ಏತತಾಠೇನಾಪಿ ತತ್ಪಾರ ಫಲ ಪ್ರಾಪ್ತ್ಯರ್ಥಂ ತದರ್ಥ ಸಂಗ್ರಹ ರೂಪಮಿಮಂ ಗ್ರಂಥಂ ಚಕಾರೇತಿ।"

"ಕೆಲವು ಶ್ರೀಮದಾಚಾರ್ಯರ ಶಿಷ್ಯರು ಬ್ರಹ್ಮಸೂತ್ರ ಭಾಷ್ಯ ಗಾರಾಯಣವನ್ನು ಮಾಡದೆಯೇ ಯಾವ ಕೆಲಸವನ್ನು ಮಾಡುತ್ತಿರಲಿಲ್ಲ. ಇಂತಹ ಶಿಷ್ಯರ ಮೇಲಿನ ಅನುಗ್ರಹ ದೃಷ್ಟಿಯಿಂದ, ಅವರಿಗೆ ಇತರ ಕಾರ್ಯಾಚರಣೆಗೆ ಅವಕಾಶವನ್ನು ಒದಗಿಸಲು ಅನುಕೂಲವಾಗುವಂತೆ. ಶ್ರೀಮದಾಚಾರ್ಯರು ಭಾಷ್ಯ ಪಠಣ ಫಲ ಪ್ರಾಪ್ತಿಗಾಗಿ ಭಾಷ್ಯಾರ್ಥ ಸಂಗ್ರಹ ರೂಪವಾದ ಈ ಸಂಕ್ಷಿಪ್ತ ಗ್ರಂಥವನ್ನು ರಚಿಸಿದರೆಂದು ಹೇಳಿದರು.

ಶ್ರೀಮದಚ್ಯುತ ಪ್ರೇಕ್ಷಾಚಾರ್ಯರು ನಿತ್ಯವೂ ಭಾಷ್ಯ ಪಾರಾಯಣ ಮಾಡದೇ ಭೋಜನವನ್ನು ಮಾಬುತ್ತಿರಲಿಲ್ಲ, ಒಂದು ಸಾಧನೀ ದ್ವಾದಶಿಯ ಸಂದರ್ಭದಲ್ಲಿ, ಭಾಷ್ಯಪಾರಾಯಣವನ್ನು ಮುಗಿಸಲು ಅಸಮರ್ಥರಾವ ಹಾಗೂ ಭೋಜನವನ್ನು ಸ್ವೀಕರಿಸಲು ಒಪ್ಪದ ಶ್ರೀ ಅಚ್ಯುತಪ್ರೇಕ್ಷಾಚಾರ್ಯರ ಸೌಕರ್ಯಕ್ಕಾಗಿ ಶ್ರೀಮದಾಚಾರ್ಯರು ಈ ಸಂಕ್ಷೇಪ ಭಾಷ್ಯವನ್ನು ರಚಿಸಿಕೊಟ್ಟರೆಂಬ ಐತಿಹ್ಯವನ್ನೂ ಕೆಲವರು ಹೇಳುವರು.

ಏನೇ ಆದರೂ. ಈ ಗ್ರಂಥದ ಪಾರಾಯಣದಿಂದ ಬ್ರಹ್ಮಸೂತ್ರ ಭಾಷ್ಯದ ಪಾರಾಯಣ ಫಲ ದೊರೆಯುವದಕ್ಕಾಗಿಯೇ ರಚಿತವಾಗಿದೆಯೆಂಬುವ ದರಲ್ಲಿ ಯಾವ ಐತಿಹ್ಯ ಭೇದಗಳೂ ಇರುವದಿಲ್ಲ. "ಮಹಾನಂದ ತೀರ್ಥರ ಭಾಷ್ಯಭಾವದ ಆವರ್ತಶೀಲರಾದ ದೇವತೆಗಳನ್ನು ಮೊದಲ್ಗೊಂಡು ನರರ ವರೆಗೆ ಸಕಲರೂ ಮುಕುಂದ ಪ್ರಸಾದದಿಂದ ಮೋಕ್ಷವನ್ನು ಪಡೆಯುತ್ತಾರೆ"

> ಮಹಾನಂದ ತೀರ್ಥಸ್ಯ ವಿ ಭಾಷ್ಯ ಭಾವಂ
> ಮನೋವಾಗ್ಭಿರಾವರ್ತಯಂತೆ ಸ್ವಶಕ್ತ್ಯಾ ।
> ಸುರಾದ್ಯಾ ನರಾಂತಾ ಮುಕುಂದ ಪ್ರಸಾದಾ
> ದಿಮಂ ಮೋಕ್ಷಮೇತಿ ಭಜಂತೇ ಸದೇತಿ ॥ "

"ಇಂತಹ ದೇವಾಧಿ ದೇವತೆಗಳಿಂದಲೂ ಅಪೇಕ್ಷಣೀಯವಾದ ಮಧ್ವ ಭಾಷ್ಯ ವನ್ನು ಅಧ್ಯಯನ ಮಾಡಿದ ಮನುಜ ತನಗೆ ಅಪೇಕ್ಷಿತವಾದುದೆಲ್ಲವನ್ನೂ ಪಡೆ ಯುವನೆಂಬುದರಲ್ಲಿ ಸಂಶಯವಿಲ್ಲ. ಇದಕ್ಕೆ ಅನೇಕ ನಿದರ್ಶನಗಳುಂಟು. ಶ್ರೀ ವಾದಿರಾಜ ಶ್ರೀಗಳವರು ಇಂತಹ ಫಲ ದೊರೆಯುವದೆಂಬುದಕ್ಕೆ "ನಾವೇ ಪ್ರತ್ಯಕ್ಷ ಸಾಕ್ಷಿಗಳು" ಎಂದು ಹೇಳಿದ್ದಾರೆ.

## ಉಪಸಂಹಾರ

ಗುರು ಮುಖದಿಂದ ಅಣು ಭಾಷ್ಯವನ್ನು ಅಧ್ಯಯನ ಮಾಡಿರುವ ತತ್ತ್ವ ಜಿಜ್ಞಾಸುಗಳ ಮನಸಕ್ಕೆ ಅನುಕೂಲವಾಗುವಂತೆ ಪ್ರತಿಪದಾರ್ಥ ಪಾದಾರ್ಥ ಸಂಗ್ರಹ ಹಾಗೂ ಬ್ರಹ್ಮ ಸೂತ್ರಾಣು ಭಾಷ್ಯಾರ್ಥ ಸಂಗ್ರಹಗಳೊಂದಿಗೆ ಗ್ರಂಥವನ್ನು ಓದುಗರ ಮುಂದೆ ಇಡುತ್ತಿರುವ ನಮ್ಮ ವಹೋದರ ಶ್ರೀ ಹನುಮೇಶಾಚಾರ್ಯನ ಪ್ರಯತ್ನವು. ವಾಚಕರ ಜ್ಞಾನತೃಪೆಯನ್ನು ಹಿಂಗಿಸು ವದರ ಮೂಲಕ ಸಾರ್ಥಕವಾಗುವದೆಂಬುದಾಗಿ ಹಾರೈಸುತ್ತೇನೆ,

ಎಲ್ಲ ಸುಜನರೂ ಸರ್ವಮೂಲ ಗ್ರಂಥಗಳ ಸರಿಯಾದ ಲಾಭವನ್ನು ಹೊಂದಲೆಂಬ ಸದುದ್ದೇಶದಿಂದ ಕನ್ನಡ ವ್ಯಾಖ್ಯಾನ ಸಹಿತ ಸರ್ವ ಮೂಲ ಗ್ರಂಥಗಳ ಪ್ರಕಾಶನದ ಮಹಾ ಕಾರ್ಯವನ್ನು ಕೈಗೊಂಡ, ಮಲ್ಲೇಶ್ವರಂನ ರಾಘವೇಂದ್ರಾಶ್ರಮದ ಮ್ಯಾನೇಜಿಂಗ್ ಟ್ರಸ್ಟಿಗಳಾದ ಶ್ರೀ ಬಿ. ಎನ್, ವಾಸು ದೇವರಾಯ ರಬದ್ಧ ದೀಕ್ಷೆ ಹಾಗೂ ಕಾರ್ಯಾತುರತಯ ಫಲವಾಗಿ ಅಣು ಭಾಷ್ಯ ಸರ್ವಮೂಲ ಪ್ರಕಾಶನದಲ್ಲಿ ತೃತೀಯ ಸಂಪುಟವಾಗಿ ಹೊರಬರುತ್ತಲಿದೆ. 'ಶ್ರೀಮದ್ ದ್ವಾದಶ ಸ್ತೋತ್ರಂ, ಸದಾಚಾರಸ್ಮೃತಿ, ಕೃಷ್ಣಾಮೃತ ಮಹಾರ್ಣ

ರ್ಣವ' ಸಂಕಲನವು ದ್ವಿತೀಯ ಸಂಪುಟ ರೂಪದಲ್ಲಿ ಈ ಹಿಂದೆಯೇ ಪ್ರಕಾಶಿತ ವಾಗಿ ವಾಚಕರನ್ನು ತೋಷಿಸಿದೆ. ಶ್ರೀ ವಾಸುದೇವರಾಯರಿಗೆ ಕೈಗೊಂಡ ಕಾರ್ಯವೆಲ್ಲಿ ಫಲ ಪರ್ಯವಸಾಯಿತ್ವವನ್ನೂ. ಆಯುರಾರೋಗ್ಯ ಐಶ್ವರ್ಯ ಗಳನ್ನು ದಯಪಾಲಿಸಿ ಅನುಗ್ರಹಿಸುವಂತೆ ನಮ್ಮ ಗುರುಗಳಿ ದ್ವಾರಾ ಅವರ ಉಪಾಸ್ಯದೈವ ಶ್ರೀ ಬಾದಾರಾಯಣ ದೇವರನ್ನು ಪ್ರಾರ್ಥಿಸುತ್ತೇನೆ,

ಇತಿ ಶಂ

**ಮಧ್ವಾಚಾರ್ಯ ಗಂಗೂರ, B.E., (Elec) M.E. (Aero)**

ಪುಣೆ. 1–8–1980 ವರಿಷ್ಟ ವೈಜ್ಞಾನಿಕಾಧಿಕಾರೀ

ಆ. ವ. ಪಂಚಮೀ ರಕ್ಷಾ ಅನುಸಂಧಾನ ತಥಾ ವಿಕಾಸ ಸೇವಾ

(ಶ್ರೀ ಜಯತೀರ್ಥರ ಆರಾಧನಾ)

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತಮ್

# ಅಣುಭಾಷ್ಯಮ್

ಶ್ರೀಃ ಹರಿಃ ಓಂ।

**ನಾರಾಯಣಂ ಗುಣೈಸ್ಸರ್ವೈ ರುದೀರ್ಣಂ ದೋಷವರ್ಜಿತಂ॥**
**ಜ್ಞೇಯಂಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ॥೧॥**

**ಪ್ರತಿಪದಾರ್ಥ :—** ಸರ್ವೈ : = ಸಮಸ್ತವಾದ, ಗುಣೈ: = ಆನಂದ, ಜ್ಞಾನ, ಇವೇ ಮುಂತಾದ, ಗುಣಗಳಿಂದ, ಉದೀರ್ಣಂ = ಪರಿಪೂರ್ಣನಾದ, ದೋಷ = ಜನನ ಮರಣ ಚಿಂತಾ ಸಂತಾಪ ಮುಂತಾದ ದೋಷಗಳಿಂದ ವರ್ಜಿತಂ = ದೂರನಾದ (ದೋಷಶೂನ್ಯನಾದ = ದೋಷಸಂಪರ್ಕವಿಲ್ಲದ), ಜ್ಞೇಯಂ = ಸಜ್ಜನರಿಂದ, ಶ್ರವಣ-ಮನನ-ನಿಧಿಧ್ಯಾಸನಗಳಿಂದ ಉತ್ಪನ್ನವಾಗುವ ಅಪರೋಕ್ಷಜ್ಞಾನದಿಂದ ವಿಷಯೀಕರಿಸಲು ಯೋಗ್ಯನಾದ, ಗಮ್ಯಂ = ಜ್ಞಾನರೂಪ ಉಪಾಯದಿಂದ ಸಜ್ಜನರಿಂದ ಹೊಂದಲು ಶಕ್ಯನಾದ ನಾರಾಯಣಂ = ನಾರಾಯನನ್ನು ನತ್ವಾ = ನಮಸ್ಕರಿಸಿ, ಗುರೂಂಶ್ಚಾಪಿ = ನಾರಾಯಣಸ್ವರೂಪರಾದ (ನಾರಾಯಣಾಭಿನ್ನರಾದ) ಗುರುಗಳನ್ನು ಸಹ, ನತ್ವಾ = ನಮಸ್ಕಾರ ಮಾಡಿ, ಸೂತ್ರಾರ್ಥಃ = ಬ್ರಹ್ಮಸೂತ್ರಗಳ ಅರ್ಥವು ಉಚ್ಯತೇ = ಹೇಳಲ್ಪಡುತ್ತದೆ.

**ತಾತ್ಪರ್ಯ :—** ಅನಂತಕಲ್ಯಾಣಗುಣಗಳಿಂದ ಪರಿಪೂರ್ಣನಾದ, ಯಾವ ದೋಷವೂ ಇಲ್ಲದ, ಸಜ್ಜನರಿಂದ ತಿಳಿಯಲೂ ಹೊಂದಲೂ ಯೋಗ್ಯನಾದ ನಾರಾಯಣನನ್ನು ನಮಸ್ಕರಿಸಿ, ನಾರಾಯಣಸ್ವರೂಪರಾದ ನಮ್ಮ ಗುರುಗಳನ್ನು ನಮಸ್ಕರಿಸಿ ಬ್ರಹ್ಮಸೂತ್ರಗಳ ಅರ್ಥವನ್ನು ನಾವು (ಶ್ರೀಮದಾಚಾರ್ಯರು) ಹೇಳುತ್ತೇವೆ.

"ಅದುಃಖಮಿತರತ್ಸರ್ವಂ ಜೀವಾಏವತು ದುಃಖಿನಃ । ತೇಷಾಂ ದುಃಖ ಪ್ರಹಾಣಾಯ ಶ್ರುತಿರೇಷಾಪ್ರವರ್ತತೇ।" ಜಗತ್ತಿನಲ್ಲಿರುವ ಪದಾರ್ಥಗಳನ್ನು ನಾವು ಜೀವ, ಜಡ, ಪರಮಾತ್ಮ ಎಂದು ಮೂರು ವಿಧವಾಗಿ ವಿಂಗಡಿಸಬಹುದು; ಈ ಮೂರರಲ್ಲಿ ಜಡ ಪದಾರ್ಥಗಳಿಗೆ ಸಂವೇದನಾ ಶಕ್ತಿಯು ಇರುವದಿಲ್ಲವಾದ್ದರಿಂದ ಅವುಗಳಿಗೆ ದುಃಖದ ಪ್ರಸಕ್ತಿಯಿಲ್ಲ. ಪರಮಾತ್ಮನು ಸಕಲಸದ್ಗುಣನಿಧಿಯೂ ಸಮಸ್ತದೋಷರಹಿತನೂ ಆದುದರಿಂದ ಅವನಿಗೆ ಯಾವ ದೋಷದ

* ಈ ಎಲ್ಲ ಅರ್ಥಗಳ ವಿವರಣೆಯನ್ನು ಹಾಗೂ ಇನ್ನೂ ಅನೇಕ ವಿಶಿಷ್ಟ ವಿಷಯಗಳನ್ನು "ಅಣುಭಾಷ್ಯ"ದ ದ್ವಿತೀಯ ಪುಸ್ತಕದಲ್ಲಿ ವಿವರಿಸಲಾಗುವದು.

ಅನಂತಾರ್ಥಗರ್ಭಿತವಾದ ಶ್ರೀಮದಾಚಾರ್ಯರ ಶಾಸ್ತ್ರಸಾಗರದಲ್ಲಿ ಅನಂತ ರತ್ನಗಳು ದೊರೆಯುವವೆಂಬುದಕ್ಕೆ ಈ ಮಂಗಲಾಚರಣ ಪದ್ಯವೇ ಪ್ರತ್ಯಕ್ಷ ನಿದರ್ಶನವಾಗಿರುವದು. ಪ್ರಾಚೀನ ವ್ಯಾಖ್ಯಾನಕಾರರ ಸರಣಿಯನ್ನು ಅರಿತು ಕೊಂಡಾಗ ಸ್ಥೂಲದೃಷ್ಟಿಯವರೂ ಸಹ ಮಂಗಲಾಚರಣಕ್ಕೆ ೨೦-೨೫ ರೀತಿ ಯಾಗಿ ವಾಕ್ಯಯೋಜನಾಪೂರ್ವಕ ಅರ್ಥವನ್ನು ಅರಿಯಬಹುದಾಗಿದೆ. ಇದೇ ಶ್ರೀಮದಾಚಾರ್ಯರ ಶಾಸ್ತ್ರದ ವೈಶಿಷ್ಟ್ಯವಾಗಿರುವದು.

**ವಿಷ್ಣುರೇವ ವಿಜಿಜ್ಞಾಸ್ಯಃ ಸರ್ವಕರ್ತಾಽಽಗಮೋದಿತಃ |**
**ಸಮನ್ವಯಾದೀಕ್ಷತೇಶ್ಚ ಪೂರ್ಣಾನಂದೋಂತರಃ ಖವತ್ ||೨||**

**ಪ್ರಣೇತಾ ಜ್ಯೋತಿರಿತ್ಯಾದ್ಯೈಃ ಪ್ರಸಿದ್ಧೈರನ್ಯವಸ್ತುಷು |**
**ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ ||೩||**

**ಪ್ರತಿಪದಾರ್ಥ :—** 2) ವಿಷ್ಣುರೇವ= ದೇಶಕಾಲ ಗುಣಗಳಿಂದ ವ್ಯಾಪ್ತ ನಾದ (ಪರಿಮಿತ ರಹಿತನಾದ) ಅಂದರೆ ಎಲ್ಲ ದೇಶದಲ್ಲಿಯೂ ಎಲ್ಲ ಕಾಲ ಲ್ಲಿಯೂ ಇದ್ದು ಗುಣಗಳಿಂದ ಪರಿಪೂರ್ಣನಾದ ಪರಮಾತ್ಮನೇ ವಿಜಿಜ್ಞಾಸ್ಯಃ ವೇ= ಆತನ ಪ್ರಸಾದದಿಂದ, ಜಿಜ್ಞಾಸ್ಯಃ= ಶ್ರವಣ-ಮನನ ನಿದಿಧ್ಯಾಸನಗಳಿಂದ ವಿಷಯೀಕರಿಸಲು ಯೋಗ್ಯನಾಗಿರುವನು; ಸರ್ವಕರ್ತಾ= ಸರ್ವ, ಸಮಸ್ತ ವಾದ ರಮಾ ಬ್ರಹ್ಮಾದಿ ಸಕಲ ಜೀವ ಜಡಾತ್ಮಕ ಪ್ರಪಂಚಕ್ಕೆ ಕರ್ತಾ =ಸೃಷ್ಟಿ ಸ್ಥಿತಿ ಸಂಹಾರ ನಿಯಮನ-ಜ್ಞಾನ-ಅಜ್ಞಾನ ಬಂಧ ಮೋಕ್ಷ ಪ್ರದನು. ಶ್ರೀ ವಿಷ್ಣುವೇ ಆಗಿರುವನು. ಆಗಮೋದಿತಃ= ಆಗಮ, ಸಕಲ ಸದಾಗಮಗಳಿಂ ದಲೂ ಶ್ರೀ ವಿಷ್ಣುವೇ ಉದಿತಃ= ಸರ್ವಕರ್ತನೆಂದು ಉಕ್ತನಾಗಿರುವನು. ಸಮನ್ವಯಾತ್= ಉಪಕ್ರಮಾದಿ ಲಿಂಗಗಳಿಂದ ಶ್ರೀ ವಿಷ್ಣುವೇ ಮುಖ್ಯವಾಗಿ ಸರ್ವವೇದ ಪ್ರತಿಪಾದ್ಯನಾಗಿರುವನು. ಈಕ್ಷತೇಶ್ಚ= ಪರಮಾತ್ಮನು ಪ್ರತ್ಯಕ್ಷಾದಿ ಗಳಿಗೆ ಅಗೋಚರನಾಗಿದ್ದರೂ ಶಾಸ್ತ್ರೀಯ ಶಬ್ದ ಸಾಮೂಹಗಳಿಂದ ವಾಚ್ಯನಾಗಿ ರುವನು ಪೂರ್ಣಾನಂದ ಪರಿಪೂರ್ಣ ಆನಂದ ಉಳ್ಳವನಾಗಿರುವನು. ಅಂತರಃ ಸರ್ವರಿಗೂ ನಿಯಾಮಕನಾಗಿ, ಸರ್ವರಿಂದಲೂ ಭಿನ್ನನಾಗಿ ಸರ್ವರಿಗೂ ಅಂತಸ್ಥ ನಾಗಿರುವನು. ಖವತ್= ಆಕಾಶದಂತೆ ಅಂತರಃ= ಅವಕಾಶ ಉಳ್ಳವನಾಗಿರು ವನು. ಪ್ರಣೇತಾ =ಮುಖ್ಯಜೀವನ ಪ್ರದನಾಗಿರುವನು. ಜ್ಯೋತಿಃ =ಪ್ರಕಾಶ ರೂಪನಾಗಿರುವನು. ಅಥವಾ ಜೇ= ಉತ್ಪತ್ತಿಯನ್ನು ಹೊಂದಿರುವ ವಸ್ತುವಿಗೆ ಓತಿಃ =ಆಶ್ರಯನಾಗಿರುವನು. ಇತ್ಯಾದ್ಯೈಃ = ಇವೇ ಮುಂತಾದ ಅನ್ಯ ವಸ್ತುಷು= ವಿಷ್ಣುಭಿನ್ನವಾದ ಇತರ ವಸ್ತುಗಳಲ್ಲಿ ಪ್ರಸಿದ್ಧೈಃ= ಶ್ರುತ್ಯಾದಿಗಳಿಂದ

ವಾಚಕಗಳಿಂದು ಪ್ರಸಿದ್ಧವಾದ, ಸರ್ವೈಃ= ಆಯಾ ಪ್ರಕರಣಗಳಲ್ಲಿರತಕ್ಕ ಸರ್ವ ಶಬ್ದಗಳಿಂದ ಅಥವಾ ತತ್ಸಮಾನ ಶಬ್ದಗಳಿಂದ, ಸರ್ವಗುಣತ್ವತಃ =ಸ್ವಾತಂತ್ರ್ಯಾದಿ ಗುಣಗಳಿರುವದರಿಂದ, ಆಯಾ ಪ್ರಕರಣದಲ್ಲಿರುವ ಶ್ರುತಿ ಲಿಂಗ ರೂಪ ಧರ್ಮ ವಿರುವುದರಿಂದ ಮತ್ತು ಶಬ್ದ ಪ್ರವೃತ್ತಿ ನಿಮಿತ್ತತ್ವರೂಪ ಧರ್ಮವಿರುವದರಿಂದ ಏಕ ವಿಷ್ಣುರೇವ। ಸಮಾಧಿ ಕರಹಿತನಾದ ವಿಷ್ಣುವೊಬ್ಬನೇ ಉಚ್ಯತೇ =ಮುಖ್ಯ ವಾಗಿ ಹೇಳಲ್ಪಡುತ್ತಾನೆ (ವಾಚ್ಯನಾಗಿರುತ್ತಾನೆ).

**ಪಾದಾರ್ಥಸಂಗ್ರಹ :—** ಶ್ರೀ ಬಾದರಾಯಣರಿಂದ ಪ್ರಣೀತವಾದ ಬ್ರಹ್ಮ ಮೀಮಾಂಸಾ ಶಾಸ್ತ್ರವು 564 ಸೂತ್ರಗಳಿಂದ ಕೂಡಿರುವದು. ಈ ಸೂತ್ರಗ ಳನ್ನು ನಾಲ್ಕು ಅಧ್ಯಾಯಗಳಲ್ಲಿ ವಿಂಗಡಿಸಿರುವರು. ಪ್ರತಿಯೊಂದು ಅಧ್ಯಾಯವೂ ನಾಲ್ಕು ಪಾದಗಳಿಂದ ಯುಕ್ತವಾಗಿರುವದು. "ಅನ್ಯತ್ರ ಪ್ರಸಿದ್ಧನಾಮವಾದವು ಮೊದಲನೆಯ ಅಧ್ಯಾಯದ ಮೊದಲನೆಯ ಪಾದವಾಗಿದೆ. ಈ ಪಾದದಲ್ಲಿ ಅಡಕವಾಗಿರುವ ಸೂತ್ರಗಳಿಗೆ ಶ್ರೀಮದಾಚಾರ್ಯರು ಮೇಲಿನ ಶ್ಲೋಕಗಳಿಂದ ವ್ಯಾಖ್ಯಾನ ಮಾಡಿರುವರು.

ಮೊದಲನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಹನ್ನೆರಡು ಅಧಿ ಕರಣಗಳಿದ್ದು, ಅವುಗಳಲ್ಲಿ ಮೊದಲನೆಯ ಐದು ಅಧಿಕರಣಗಳು ಸಮಗ್ರ ಬ್ರಹ್ಮ ಮಿಮಾಂಸಾ ಶಾಸ್ತ್ರಕ್ಕೆ ತಳಹದಿಯಂತಿರುವವು. ಅಧ್ಯಾಯ ಪಾದ ಪೀಠ ರೂಪ ವಾಗಿರುವುದರಿಂದ, ಆನಂದಮಯಾಧಿಕರಣದಿಂದ ಆರಂಭವಾದ ಸಮಸ್ತ ಅಧ್ಯಾಯ ಶೇಷವು,ವಿಸ್ತೃತ ದೃಷ್ಟಿಯಲ್ಲಿ ಹೇಳುವದಾದರೆ ಬ್ರಹ್ಮಮೀಮಾಂಸಾ ಶಾಸ್ತ್ರವೇ ಈ ಪಂಚಾಧಿಕರಣೀ ಪ್ರಪಂಚನ (ವ್ಯಾಖ್ಯಾನ) ರೂಪವಾಗಿರುವದು. ಈ ಪಂಚಾಧಿಕರಣಗಳ ವ್ಯಾಖ್ಯಾನವನ್ನು ಶ್ರೀಮದಾಚಾರ್ಯರು "ವಿಷ್ಣು ರೇವ ವಿಜಿಜ್ಞಾಸ್ಯಃ ಸರ್ವಕರ್ತಾಗಮೋದಿತಃ ಸಮನ್ವಯಾ ದೀಕ್ಷತೇಶ್ಚ" ಎಂಬುವದ ರಿಂದ ಸಂಗ್ರಹ ಮಾಡಿರುವರು. ಇದರ ಅರ್ಥವನ್ನು ಹೀಗೆ ಹೇಳಬಹುದು—

"ಈಕ್ಷತೇಃ ಈಕ್ಷಣೀಯತ್ವಾತ್, ಸಮನ್ವಯಾತ್ ಉಪಕ್ರಮಾದಿ ಲಿಂಗಾತ್ ಸಮ್ಯಕ್ ವಿಚಾರ್ಯಮಾಣಾ ಸರ್ವಾಗಮೋಕ್ತಃ ವಿಶ್ವಸ್ಯ ಜನ್ಮಾದಿ ಕರ್ತಾ ವಿಷ್ಣುರೇವ ವಿಶೇಷತೋ ಜಿಜ್ಞಾಸ್ಯಃ ಶ್ರವಣಾದಿನಾ ವಿಚಾರ್ಯಃ"

"ವಿಷ್ಣುವು ವೇದಗಳಿಂದ ಮಾತ್ರ ತಿಳಿಯಲು ಶಕ್ಯನು. ಸರಿಯಾಗಿ ಪರೀಕ್ಷಿಸಲ್ಪಟ್ಟ ಉಪಕ್ರಮಾದಿ ಲಿಂಗಗಳಿಂದ ವಿಷ್ಣುವೇ ಸರ್ವ ಸದಾಗಮ ಪ್ರತಿಪಾದ್ಯನು ಜಗಜ್ಜನ್ಮಾದಿಕರ್ತನು. ಆದುದರಿಂದ ಶ್ರವಣಾದಿಗಳಿಂದ ವಿಚಾರ್ಯನು ಶ್ರೀ ವಿಷ್ಣುವೇ ಆಗಿರುವನು. ಬೇರೆ ಯಾರೂ ಅಲ್ಲ."

ಲಾಗಿದೆ. ಪ್ರಥಮದಲ್ಲಿ ಪರಮಾತ್ಮನಲ್ಲಿ ಗುಣಿ ಗುಣಭೇದವನ್ನು ನಿರಾಸ ಮಾಡಿ ಆನಂದಮಯಾದಿ ಶಬ್ದಗಳಿಗೆ ಅನ್ಯಪರತ್ವವನ್ನು ನಿರಾಸ ಮಾಡಿ, ಪರಮ ಮುಖ್ಯವೃತ್ತಿಯಿಂದ ವಿಷ್ಣುಪರತ್ವವನ್ನು "ಪೂರ್ಣಾನಂದಃ" ಎನ್ನುವದರಿಂದ ವ್ಯವಸ್ಥೆ ಮಾಡಿರುವರು. ಅನಂತರ ಆಧಿದೈವಗತವಾದ ಇಂದ್ರಾದಿ ಶಬ್ದಗಳು ಆಧಿಭೌತಿಕವಾದ ಆಕಾಶಾದಿ ಶಬ್ದಗಳು. ಆಧ್ಯಾತ್ಮಿಕವಾದ ಪ್ರಾಣಾದಿ ಶಬ್ದ ಗಳು, ಸೂಕ್ತಗತವಾದ ಜ್ಯೋತಿರಾದಿ ಶಬ್ದಗಳು. ವೇದಗತವಾದ ಗಾಯತ್ರ್ಯಾದಿ ಛಂದಃಶಬ್ದಗಳು ಮತ್ತು ಅನ್ಯಪ್ರಾಪಕ ಬ್ರಹ್ಮಲಿಂಗಯುತವಾದ ಪ್ರಾಣಾದಿ ಶಬ್ದಗಳು (ಆಯಾ ಶಬ್ದ ಪ್ರವೃತ್ತಿ ನಿಮಿತ್ತಗಳಿಗೆಲ್ಲವೂ ಪರಮಾತ್ಮನ ಅಧೀನ ವಾಗಿದೆಯೆಂಬುದನ್ನು ಸಮರ್ಥಿಸಿ) ಪರಮ ಮುಖ್ಯವೃತ್ತಿಯಿಂದ ಪರಮಾತ್ಮ ವಾಚಕಗಳಾಗಿವೆಯೆಂಬುದನ್ನು ಅಂತರ, ಬವತಾ, ಪ್ರಣೇತ— ಇತ್ಯಾದಿಯಾದ ಭಾಷ್ಯದಿಂದ ಸಾಧಿಸಿರುವರು. (ಇತಿ ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ)

**ಸರ್ವಗೋ ऽತ್ತಾ ನಿಯಂತಾ ಚದೃಶ್ಯತ್ವಾದ್ಯುಜ್ಝಿತಃ ಸದಾ ।**
**ವಿಶ್ವಜೀವಾಂತರತ್ವಾದ್ಯೈಃ ಲಿಂಗೈಃ ಸರ್ವೈಃ ಯುತಃ ಸಹಿ ॥ ೪ ॥**

**ಪ್ರತಿಪದಾರ್ಥ :—** ಸದಾ = ಯಾವಾಗಲೂ, ಸರ್ವಗಃ ಸರ್ವ ಪ್ರಾಣಿಗಳ ಹೃದಯ ಗುಹೆಯಲ್ಲಿ ವಾಸವಾಗಿರುವವನು, ಸರ್ವತ್ರವ್ಯಾಪ್ತನಾಗಿರುವವನು, ಅತ್ತಾ = ಸರ್ವಸಂಹಾರಕನು ಹಾಗೂ ಜೀವರ ಕರ್ಮ (ಶುಭ) ಫಲಭೋಕ್ತೃವು, ನಿಯಂತಾ ಚ = ಎಲ್ಲರ ಅಂತಸ್ಥನಾಗಿ ನಿಯಮನ ಮಾಡುವವನು. ದೃಶ್ಯತ್ವಾದ್ಯು ಜ್ಝಿತ = ಚಕ್ಷುಸ್ಸು, ಮನಸ್ಸು ಇತ್ಯಾದಿಗಳಿಗೆ ಸಂಪೂರ್ಣವಾಗಿ ತಿಳಿಯಲು ಅಶಕ್ಯನು, ಅಂದರೆ ಅದೃಶ್ಯತ್ವಾದಿ ಧರ್ಮಗಳುಳ್ಳವನು. ವಿಶ್ವಜೀವಾಂತರ ತ್ವಾದ್ಯೈಃ = ವೇದಗಳಲ್ಲಿ ಪ್ರಸಿದ್ಧವಾದ ವೈಶ್ವಾನರಾದಿ ಶಬ್ದದಿಂದ ಬೋಧಿತ ವಾದ ವಿಶ್ವಜೀವಾಂತರತ್ವ (ಸರ್ವಜೀವರೊಳಗಿದ್ದು ನಿಯಮನ ಮಾಡುವದು) ಇವೇ ಮುಂತಾದ ಸರ್ವೈಃ = ತತ್ತತ್ಪ್ರಕರಣಗತವಾದ ಎಲ್ಲ ಲಿಂಗೈಃ = ಅನ್ಯ ವಸ್ತುಗಳಲ್ಲಿ ಪ್ರಸಿದ್ಧವಾದ ಎಲ್ಲ ಲಿಂಗಗಳಿಂದಲೂ (ನಾಮಗಳಿಂದಲೂ) ಯುತಃ = ಯುಕ್ತನಾಗಿರುವವನು, ಸಃ = ಆ ವಿಷ್ಣುವೊಬ್ಬನೇ ಆಗಿರುವನು, ಹಿ — ಏಕೆಂದರೆ, ಜ್ಞಾಪಕ ಪ್ರಮಾಣಗಳಿರುವವು. ಆದ್ದರಿಂದ ಸರ್ವಲಿಂಗಾತ್ಮಕ ಶಬ್ದವಾಚ್ಯನು ವಿಷ್ಣುವೇ ಆಗಿರುವನು.

**ಪಾದಾರ್ಥ ಸಂಗ್ರಹ :** "ಲಿಂಗೈಃ ಸರ್ವೈರ್ಯುತಃ ಸಹಿ" ಎಂಬಲ್ಲಿ ಹೇಳಿದಂತೆ ಲಿಂಗಾತ್ಮಕ ಅನ್ಯತ್ರ ಪ್ರಸಿದ್ಧ ಶಬ್ದ ಸಮನ್ವಯವು ದ್ವಿತೀಯಪಾದದ ವಿಷಯ ವಾಗಿದೆ. ಭಾವರೂಪ ಕ್ರಿಯಾತ್ಮಕ ಲಿಂಗಗಳು ಇಲ್ಲಿ ಬ್ರಹ್ಮ ಪರತ್ವೇನ ಸಮರ್ಥಿತವಾಗಿರುವವು. ಸರ್ವತ್ರ ಅವಸ್ಥಿತಿ—ಸಂಹರ್ತೃತ್ವ—ಕರ್ಮ ಫಲಭೋಗ ಅಂತಸ್ಥಿತ್ವಾ ರಮಣಮಾಡುವದು—ನಿಯಮನ ಮಾಡುವದು—ಅದೃಶ್ಯತ್ವ (ಅಭಾವ)—ವಾಚಕತ್ವಾದಿ ಅನೇಕ ಲಿಂಗಯುತವಾದ ನಾಮ—ಸಮನ್ವಯವು ಪರಮಾತ್ಮನಲ್ಲಿ ಸಮರ್ಥಿಸಲ್ಪಟ್ಟಿದೆಯೆಂಬುದನ್ನು ಭಾಷ್ಯಕಾರರು ಮೇಲಿನ ಶ್ಲೋಕದಿಂದ ವಿವರಿಸಿರುವರು (ಇತಿ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ)

ಸರ್ವಾಶ್ರಯಃ ಪೂರ್ಣಗುಣಃ ಸೋಽಕ್ಷರಃ ಸನ್ ಹೃದಬ್ಜಗಃ ||
ಸೂರ್ಯಾದಿಭಾಸಕಃ ಪ್ರಾಣಪ್ರೇರಕೋ ದೈವತೈರಪಿ ||೫||
ಜ್ಞೇಯೋ ನ ವೇದ್ಯೈಃ ಶೂದ್ರಾದ್ಯೈಃ ಕಂಪಕೋಽನ್ಯಶ್ಚ ಜೀವತಃ |
ಪತಿತ್ವಾದಿಗುಣೈರ್ಯುಕ್ತ. ತದನ್ಯತ್ರ ಚ ವಾಚಕೈಃ ||೬||
ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ ||

**ಪ್ರತಿಪದಾರ್ಥ—** ಶ್ರೀವಿಷ್ಣುವೇ ಸರ್ವಾಶ್ರಯಃ =ಸ್ವರ್ಗ ಭೂಮಿ ಮೊದಲಾದ ಸಕಲ ಲೋಕಗಳಿಗೆ—ಜೀವ ಜಡಾತ್ಮಕ ಪ್ರಪಂಚಕ್ಕೆ ಆಧಾರನು. ಪೂರ್ಣಗುಣಃ =ಆನಂದಾದಿಗುಣಗಳಿಂದ ಪರಿಪೂರ್ಣನು. ಸಃ ಅಕ್ಷರಃ =ಅವನು ನಾಶರಹಿತನಾಗಿರುವನು. ಸನ್ =ನಿರ್ದೋಷಿಯಾಗಿರುವನು. ಸ್ವತಂತ್ರನು, ಸತ್‌ಶಬ್ದ ವಾಚ್ಯನು, ಹೃದಬ್ಜಗಃ =ಹೃದಯಕಮಲದಲ್ಲಿ ವಾಸ ಮಾಡಿರತಕ್ಕವನು ಸೂರ್ಯಾದಿಭಾಸಕಃ =ಸೂರ್ಯಾದಿ ಸಕಲ ತೇಜೋಮೂರ್ತಿಗಳಿಗೂ ಸಹ ಪ್ರಕಾಶಕ ಶಕ್ತಿಯನ್ನು ಕೊಡತಕ್ಕವನು, ಪ್ರಾಣ ಪ್ರೇರಕಃ =ಪ್ರಾಣಾದಿ ಪ್ರೇರಕನು. ದೈವತೈರಪಿ =ದೇವತೆಗಳಿಂದಲೂ ಸಹ ವೇದ್ಯೈಃ =ವೇದಾದಿಗಳಿಂದ ಜ್ಞೇಯಃ =ತಿಳಿಯಲು ಯೋಗ್ಯನು, ಶೂದ್ರಾದ್ಯೈಃ =ವರ್ಣಾಪರರಾದ ಶೂದ್ರಾದಿಗಳಿಂದ, ಜ್ಞೇಯಃ ನ ವೇದ್ಯೈಃ =ವೇದಗಳಿಂದ ತಿಳಿಯಲು ಶಕ್ಯನಲ್ಲ. ಜೀವತಃ =ಜೀವನಿಗೆ ಕಂಪಕಃ =ಸಂಚಾರಾದಿ ವ್ಯಾಪಾರಾದಿಗಳನ್ನುಂಟುಮಾಡುವವನು. (ಸರ್ವಜಗಚ್ಚೇಷ್ಟಕನಾಗಿರುವನು, ಅನ್ಯಃಚ =ವಿಲಕ್ಷಣನಾಗಿರುವನು ಪ್ರಾಕೃತನಾಮರೂಪರಹಿತನಾಗಿರುವನು ಮತ್ತು ಜೀವನ ದೇಹದಿಂದ ಭಿನ್ನನಾಗಿರುವನು. ಪತಿತ್ವಾದಿಗುಣೈಃ ಯುಕ್ತಃ =ಸರ್ವಾಧಿಪತಿತ್ವಾದಿಗುಣಗಳಿಂದ ಯುಕ್ತನಾಗಿರುವನು. ಮುಖ್ಯತಃ = ಮುಖ್ಯವಾಗಿ ಅಂದರೆ ಪರಮ ಮುಖ್ಯ ವೃತ್ತಿಯಿಂದ, ತದನ್ಯತ್ರಚವಾಚಕೈಃ= ವಿಷ್ಣುವಿನಲ್ಲಿಯೂ ಮತ್ತು ಇತರರಲ್ಲಿಯೂ ವಾಚಕತ್ವೇನ ಪ್ರಸಿದ್ಧವಾದ (ಪರಮಾತ್ಮನನ್ನು ಮತ್ತು ಇತರರನ್ನು ಪ್ರತಿಪಾದಿಸುವ) ಸರ್ವಶಬ್ದೈಶ್ಚ =ಸರ್ವಶಬ್ದಗಳಿಂದಲೂ ಏಕಃ ಜನಾರ್ದನ: =ಜನ್ಮಾದಿರಹಿತನಾದ, ಸಂಸಾರದು:ಖನಾಶಕನಾದ, ಜನಾರ್ದನ ಶಬ್ದವಾಚ್ಯನಾದ ಪರಮಾತ್ಮನೊಬ್ಬನೇ ವಾಚ್ಯ: =ಹೇಳಲ್ಪಡುತ್ತಾನೆ.

**ಪಾದಾರ್ಥಸಂಗ್ರಹ—** : ತೃತೀಯಪಾದದಲ್ಲಿ ಉಭಯತ್ರ ಪ್ರಸಿದ್ಧವಾದ ನಾಮಲಿಂಗಾತ್ಮಕ ಶಬ್ದಗಳು, ಸಮನ್ವಿತವಾಗಿರುವವು. ಭೂಮ—ಅಕ್ಷರ ಸತ್—ಈಶಾನ-ವಜ್ರ—ಜ್ಯೋತಿ—ಆಕಾಶ-ಬ್ರಾಹ್ಮಣ ನಾಮಗಳು ಹಾಗೂ ಸರ್ವಾಧಾರತ್ವ ಹೃತ್ಪದ್ಮಸ್ಥಿತತ್ವ ಆನುಕೂಲ್ಯೇನ ಗ್ರಹ್ಯಮಾಣತ್ವ ಸ್ವಪ್ನಾದಿ

ದೃಷ್ಟಾಂತ್ವ ಮುಂತಾದ ಲಿಂಗಗಳು ವಿಷ್ಣುವಿನಲ್ಲಿಯೇ ಸಮನ್ವಿತವಾಗುವ ಪ್ರಕಾರವನ್ನು ಹೇಳಿದ ಶ್ಲೋಕದಲ್ಲಿ ದಿಗ್ದರ್ಶಿಸಿ "ಮುಖ್ಯತ ಸರ್ವಶಬ್ದೈ ರ್ವಾಚ್ಯ ಏಕೋ ಜನಾರ್ದನಃ" ಎಂಬುವದರಿಂದ ಪಾದ ಪ್ರತಿಪಾದ್ಯ ವಿಷಯ ವನ್ನು ಸೂಚಿಸುವರು. ಉಭಯತ್ರ ಪ್ರಸಿದ್ಧ ಶಬ್ದಗಳ ಸಮನ್ವಯ ಪ್ರಕಾರವನ್ನು ಪ್ರದರ್ಶಿಸುವವರ ಜೊತೆಯಲ್ಲಿ ಈ ಪಾದದಲ್ಲಿ, ವರ್ಣಾವರರಾದವರಿಗೆ ವೇದಾಧಿಕಾರವಿದೆಯೇ ? ಎಂಬ ಪ್ರಶ್ನೆಯನ್ನು ಪರಿಶೀಲಿಸಿ ವರ್ಣಾವರರಾದ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂಬುವನ್ನು "ಜ್ಞೇಯೋನ ವೇದೈ ಶೂದ್ರಾದ್ಯೈ" (ಪರಮಾತ್ಮನು ವರ್ಣಾವರರಾದ ಶೂದ್ರಾದಿಗಳಿಂದ ವೇದಾ ಭ್ಯಾಸ ಮೂಲಕವಾಗಿ ತಿಳಿಯಲು ಯೋಗ್ಯನಲ್ಲ) ಎಂಬುವದರಿಂದ ವ್ಯಾಖ್ಯಾನ ಮಾಡಿರುವರು.

**ಅವ್ಯಕ್ತಃ ಕರ್ಮವಾಚ್ಯೈ (ಕ್ಯೈ)ಶ್ಚ ವಾಚ್ಯ ಏಕೋಽ ಮಿತಾತ್ಮಕಃ**
**ಅವಾಂತರಂ ಕಾರಣಂ ಚ ಪ್ರಕೃತಿಃ ಶೂನ್ಯಮೇವ ಚ**
**ಇತ್ಯಾದ್ಯನ್ಯತ್ರನಿಯತೈರಪಿ ಮುಖ್ಯತಯೋದಿತಃ**
**ಶಬ್ದೈರಶೇಷೈ ಸಂತಗುಣೋ ಯಚ್ಚಬ್ದಾ ಯೋಗವೃತ್ತಯಃ**

**ಇತಿ ಶ್ರೀಮತ್ ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಾಣುಭಾಷ್ಯೆ**
**ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ಪ್ರಥಮೋಧ್ಯಾಯಃ ॥**

**ಪ್ರತಿಪದಾರ್ಥ :—** 8, 9 ವಿಷ್ಣುವು ಅವ್ಯಕ್ತಃ= ಅವ್ಯಕ್ತನಾಗಿರು ವನು. ಕರ್ಮವಾಚ್ಯೈಶ್ಚವಾಚ್ಯಃ= "ಜ್ಯೋತಿಷಾ ಯಜೇತ್" ನೇ ಮುಂತಾದ ಕರ್ಮಪ್ರತಿಪಾದಕವಾದ ವಾಕ್ಯಗಳಿಂದಲೂ ಪ್ರತಿಪಾದ್ಯನಾಗಿರುವನು ಏಕ = ಅಸದೃಶನು. ಅದ್ವಿತೀಯನು. ಸ್ವಗತಭೇದವಿವರ್ಜಿತನು ಅಮಿತಾತ್ಮಕಃ= ಅಪರಿಮಿತವಾದ ರೂಪಗಳುಳ್ಳವನು. ಅವಾಂತರಂ ಕಾರಣಂ ಚ =ಕಾರ್ಯನೂ ಕಾರಣನೂ ಆಗಿರುವನು. ಪ್ರಕೃತಿ = ಉತ್ಕೃಷ್ಟ ವ್ಯಾಪಾರ ಉಳ್ಳವನಾಗಿರು ವನು. (ಆದ್ದರಿಂದ ಪ್ರಕೃತಿ ಶಬ್ದವಾಚ್ಯನು) ಶೂನ್ಯಮ್ =(ಶಂ ಊನಂ ಕರುತೆ ಇತಿ) ದುರ್ಜನರಿಗೆ ಸುಖವನ್ನು ಕೊಡುವದಿಲ್ಲವಾ (ಕಡಿಮಾಡುವವಾ) ವಾದ್ದರಿಂದ ಶೂನ್ಯ ಶಬ್ದವಾಚ್ಯನು ಅಥವಾ ಶೂನ್ಯಮೇವಚ = ನಿಷೇದಾರ್ಥಕ ಗಳಾದ ಎಲ್ಲ ಶಬ್ದಗಳಿಂದಲೂ ಹೇಳಲ್ಪಡುವನು ಇತ್ಯಾದಿ =ಅವ್ಯಕ್ತ, ಶೂನ್ಯ, ಇವೇ ಮೊದಲಾದ ಅನ್ಯತ್ರ ನಿಯತೈಃ= ವಿಷ್ಣುವಿನಿಂದ ಇತರವಾದವು ಗಳಲ್ಲಿಯೇ ಪ್ರಸಿದ್ಧವಾದ ಶಬ್ದೈರಪಿ =ಸ್ವರಶಬ್ಧಗಳಿಂದಲೂ ಮುಖ್ಯತಯಾ

= ಪರಮ ಮುಖ್ಯ ವೃತ್ತಿಯಿಂದ ಉದಿತಃ ಪರಮಾತ್ಮನೊಬ್ಬನೇ ಹೇಳಲ್ಪ ಟ್ಟಿರುವನು. ಅತ: ಅನ್ಯತ್ರ-ಉಭಯತ್ರ–ಅನ್ಯತ್ರೈವ ಹೀಗೆ ಸಕಲ ಶಬ್ದ ಗಳಿಂದಲೂ ಪರಮಾತ್ಮನೇ ವಾಚ್ಯನಾಗಿರುವದರಿಂದ ಅನಂತಗುಣ = ಪರಮಾ ತ್ಮನು ಅನಂತ ಗುಣ ಪರಿಪೂರ್ಣನಾಗಿರುವನು. ಯತ್ = ಯಾಕೆಂದರೆ ಶಬ್ದಾ = ಶಬ್ದಗಳು ಯೋಗವೃತ್ತಯ: = ಮಹಾಯೋಗಯುಕ್ತವಾಗಿರು ವವು. ಅಂದರೆ ಅವಯವಾರ್ಥದಿಂದ ಶಬ್ದಗಳು ಆಯಾ ಧರ್ಮಗಳನ್ನು ಗುಣ ಗಳನ್ನು ಪರಮಾತ್ಮನಿಗೆ ಬೋಧಿಸುವವು.

**ಪದಾರ್ಥ ಸಂಗ್ರಹ :—** ಈ ವಾದದಲ್ಲಿ ಪರಮಾತ್ಮೇತರ ವಸ್ತುವಿ ನಲ್ಲಿಯೇ ಪ್ರಸಿದ್ಧವಾದ ನಾಮಲಿಂಗಾತ್ಮಕ (ಅನ್ಯತ್ರೈವ-ಪ್ರಸಿದ್ಧ) ಶಬ್ದಗಳ ಸಮನ್ವಿತವಾಗಿರವವೆಂಬುದನ್ನು ಶ್ರೀಮದಾಚಾರ್ಯರು "ಇತ್ಯಾದ್ಯನ್ಯತ್ರನಿಯತ್ಯೈ ರಪಿ ಮುಖ್ಯತಯೋದಿತ" ಎಂಬುವವರಿಂದ ಹೇಳಿರುವರು. ಐಶ್ವರ್ಯಕ್ಕೆ ವಿರೋಧಿಗಳಾದ ಅವ್ಯಕ್ತ-ಬದ್ಧ-ದು ಖೀ. ಅವರ ಮುಂತಾದ ಶಬ್ದಗಳು ಪರಮ ಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿಯೇ ಚರಿತಾರ್ಥತೆಯನ್ನು ಹೊಂದುವವು. ಅದರಂತೆ ಸ್ತ್ರೀಲಿಂಗಶಬ್ದಗಳು, ನಿಷೇದಾರ್ಥಕ ಶಬ್ದಗಳು ಪಂಚಜನಾದಿ ಬಹುತ್ವವಾಚಿ ಶಬ್ದಗಳು. ಅವಾಂತಕಾರಣಾರ್ಥಕ ಅಥವಾ ಅವಾಂತರ ಕಾರಣತ್ವಾದಿ ಲಿಂಗಪ್ರತಿಪಾದಕ ಆಕಾಶಾದಿ ಶಬ್ದಗಳು. ಕರ್ಮ; ಕರ್ಮಾಂಗ, ಕಾಲಾದಿ ವಾಚಕಗಳಾದ ಜ್ಯೋತಿರಾದಿ ಶಬ್ದಗಳು. ಹೀಗೆ ಅನ್ಯತ್ರ ದಲ್ಲಿಯೇ ಪ್ರಸಿದ್ಧವಾದ ಸಕಲ ನಾಮಲಿಂಗಾತ್ಮಕ ಶಬ್ದವನ್ನು ಮೇಲಿನ ಶ್ಲೋಕ ದಿಂದ ಪ್ರದರ್ಶಿಸುವರು.

## ಪ್ರಥಮಾಧ್ಯಾಯಾರ್ಥ ಸಂಗ್ರಹ

"ತಸ್ಮಾತ್ಪರತೋಽನಂತಗುಣೋ ಯಚ್ಛಬ್ದಾ ಯೋಗ ವೃತ್ತಯ "

"ಸಕಲ ವೈದಿಕ ಶಬ್ದಗಳೂ ಸಹ ಪರಮಾತ್ಮನನ್ನೇ ಮುಖ್ಯವಾಗಿ ಬೋಧಿಸುವವು' ಎಂಬುದು ಪ್ರಥಮಾಧ್ಯಾಯವಾದ ಸಮನ್ವಯಾಧ್ಯಾಯದಿಂದ ಸಮರ್ಥಿತವಾಗಿರುವದು. ಪರಮಾತ್ಮನ ಗುಣ ಪರಿಪೂರ್ಣತ್ವ ಸಮರ್ಥನೆಗಾ ಗಿಯೇ ಪ್ರಥಮಾಧ್ಯಾಯವು ಪ್ರವೃತ್ತವಾಗಿರುವದು. ಸರ್ವಶಬ್ದಗಳು ಮುಖ್ಯವೃತ್ತಿ ಯಿಂದ ಪರಮಾತ್ಮ ವಾಚಕಗಳೆಂದಾದರೆ ಪರಮಾತ್ಮನು ಗುಣಪರಿಪೂರ್ಣನೆಂದು ಹೇಗೆ ಸಿದ್ಧವಾಗುವದು ? ಎಂದು ಶಂಕೆಯು ಬರುವದು ಸ್ವಾಭಾವಿಕ. ಇದಕ್ಕೆ ಉತ್ತರ ರೂಪವಾಗಿಯೇ ಶ್ರೀಮದಾಚಾರ್ಯರು "ಸ್ವರ ಶಬ್ದಗಳು ಪರಮಾತ್ಮ ಬೋಧಕಗಳಾಗಿರುವದರಿಂದಲೇ ಪರಮಾತ್ಮನು ಅನಂತಗುಣ ಪರಿಪೂರ್ಣ

ನಾಗಿದ್ದಾನೆಂದು ಹೇಳಿ, ಇದಕ್ಕೆ ಶಬ್ದಗಳು ಯೋಗ ವೃತ್ತಿಯುಳ್ಳವುಗಳಾಗಿರುವದೇ ಕಾರಣವೆಂದಿರುವರು. (ಯುಜ್ಯತ್ವಾದ್ಯೋಗವೃತ್ತಯ ಯತ್ ಯಸ್ಮಾತ್ ಯೋಗೇನ ಅವಯವಾರ್ಥ ಸಂಬಂಧೇನ ವೃತ್ತಿ ಯೇಷಾಂತೇ ಯೋಗವೃತ್ತಯೋ ಯೌಗಿಕಾ ಇತ್ಯರ್ಥ) ಶಬ್ದಗಳು ಅವಯವಾರ್ಥ ಸಂಬಂಧದಿಂದ (ಯೋಗ) ಆಯಾ ಗುಣಗಳನ್ನು ಬೋಧಿಸುವವು ಸರ್ವ ಶಬ್ದ ವಾಚ್ಯನು ಪರಮಾತ್ಮನೆಂದು ಸಿದ್ಧಮಾಡಿರುವದರಿಂದ ಸರ್ವ ಶಬ್ದಗಳಿಂದ ಬೋಧಿತವಾಗುವ ಗುಣಗಳೆಲ್ಲವೂ ಪರಮಾತ್ಮನಲ್ಲಿರುವವೆಂದು ಹೇಳಿದಂತಾಗುವದು. ಸರ್ವ ವೈದಿಕ ಶಬ್ದಗಳು ಪರಮಾತ್ಮವಾಚಕಗಳೆಂದ ಮೇಲೆ ಸರ್ವವೇದ ಪ್ರತಿಪಾದ್ಯ—ಸರ್ವವೇದೋಕ್ತ ಅನಂತಾನಂತ ಕಲ್ಯಾಣಗುಣ ವಿಶಿಷ್ಟನು ಪರಮಾತ್ಮನೆಂದು ಸಿದ್ಧವಾಗುವದು. ಇದರಿಂದ ಪರಮಾತ್ಮನು ಅನಂತ ಕಲ್ಯಾಣಗುಣಪೂರ್ಣನೆಂಬುದು ಪ್ರಥಮಾಧ್ಯಾಯದಿಂದ ಸಿದ್ಧವಾದ ವಿಷಯವಾಗಿರುವದು.

ಇಲ್ಲಿಗೆ ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯರಿಂದ ವಿರಚಿತವಾದ ಅಣುಭಾಷ್ಯದಲ್ಲಿ ಪ್ರಥಮಾಧ್ಯಾಯವು ಸಮಾಪ್ತವಾಯಿತು.

**ಶ್ರೌತಸ್ಮೃತಿ ವಿರುದ್ಧತ್ವಾತ್, ಸ್ಮೃತಯೋ ನ ಗುಣಾನ್ ಹರೇಃ ।**
**ನಿಷೇದ್ಧುಂ ಶಕ್ನುಯುರ್ವೇದಾ, ನಿತ್ಯತ್ವಾನ್ಮಾನಮುತ್ತಮಮ್ ॥೧॥**
**ದೇವತಾವಚನಾದಾಪೋ ವದಂತೀತ್ಯಾದಿಕಂ ವಚಃ ।**
**ನಾಯುಕ್ತವಾದ್ಯ ಸನ್ನೈವ ಕಾರಣಂ ದೃಶ್ಯತೇ ಕ್ವಚಿತ್ ॥೨॥**
**ಅಸಜ್ಜಗತ್ಪ್ರಧಾನಾದಿಶಬ್ದಾ ಬ್ರಹ್ಮೈವ ನಾಪರಮ್ ।**
**ಕ್ವಾಪಿ ಪೂರ್ಣ ಗುಣೋಹರಿಃ**
**ಸ್ವಾತಂತ್ರ್ಯಾತ್ಸರ್ವಕರ್ತೃತ್ವಾನ್ನಾಯುಕ್ತಂ ತದ್ವದಸ್ಥಿತಿಃ ॥೩॥**

**ಪ್ರತಿ ಪದಾರ್ಥ** : ಶ್ರೌತಸ್ಮೃತಿ ವಿರುದ್ಧತ್ವಾತ್ = ಶ್ರುತಿ ಸಂವಾದಿಯಾದ ಪಂಚರಾತ್ರಾದಿ ಸ್ಮೃತಿಗಳಿಂದ ಬಾಧಿತವಾಗುವದರಿಂದ (ಶ್ರುತ್ಯನುಸಾರಿಯಾದ ಪಂಚರಾತ್ರಾದಿ ಸ್ಮೃತಿಗಳಿಗೆ ವಿರುದ್ಧವಾಗಿರುವದರಿಂದ) ಸ್ಮೃತಯಃ = ಶೈವಾದಿ ಸ್ಮೃತಿಗಳು ಹರೇಃ = ಪರಮಾತ್ಮನ ಗುಣಾನ್ = ಶ್ರುತ್ಯುಕ್ತವಾದ ಗುಣಗಳನ್ನು ನಿಷೇದ್ಧುಂ = ಅಲ್ಲಗಳೆಯಲು ನಿಷೇಧಿಸಲು ನ ಶಕ್ನುಯುಃ ಸಮರ್ಥವಾಗುವುದಿಲ್ಲ. ಏಕೆಂದರೆ, ವೇದಾಃ = ವೇದಗಳು ನಿತ್ಯತ್ವಾತ್ = ನಿತ್ಯವಾಗಿರುವದರಿಂದ ಹಾಗೂ ಅಪೌರುಷೇಯವಾಗಿರುವದರಿಂದ ಉತ್ತಮಂ = ಉತ್ಕೃಷ್ಟವಾದ, ನಿರ್ದುಷ್ಟವಾದ ಪ್ರಬಲವಾದ ಮಾನಂ ಪ್ರಮಾಣವಾಗಿರುವದು. (ಅದರಂತೆ ವೇದಾನುಸಾರಿಯಾದ ಪಂಚ

ರಾತ್ರಾದಿ ಸ್ಮೃತಿಗಳೂ ಸಹ ಉತ್ತಮ ಪ್ರಮಾಣವಾಗುವವು). ಅಪ್ಯೋಃ ಪದಂತೀತ್ಯಾದಿಕಂ ವಚಃ="ನೀರು ಮಾತನಾಡುತ್ತದೆ" ಇವೇ ಮುಂತಾದ ವೇದವಾಕ್ಯವು ದೇವತಾವಚನಾತ್=ಜಲಾಭಿಮಾನಿ ಅಥವಾ ಆಯಾ ಅಭಿಮಾನಿ ದೇವತಾ ಪರವಾಗಿರುವದರಿಂದ ನಾಯುಕ್ತವಾದಿ=ಯುಕ್ತಿಗೆ ವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವದಿಲ್ಲ. ಅಸತ್ ಅಸತ್ತು ಕ್ವಚಿತ್ ಯಾವ ಸ್ಥಳದಲ್ಲಿಯೂ ಕೂಡ ನೈವ ಕಾರಣಂ ದೃಶ್ಯತೇ= ಕಾರಣವಾಗಿ ತೋರುವದಿಲ್ಲ. ಅಸಜ್ಜೀವ ಪ್ರಧಾನಾದಿ ಶಬ್ದಾ. ಅಸತ್ ಜೀವ ಪ್ರಧಾನ ಇದೇ ಮುಂತಾದ ಶಬ್ದಗಳು ಬ್ರಹ್ಮೈವ ವಿಷ್ಣುವನ್ನೇ ಕಾರಣತ್ವೇನ=ಜಗತ್ತಿಗೆ ಕಾರಣನೆಂದು ವದಂತಿ=ಹೇಳುತ್ತವೆ. ನಾಪರಂ= ಬೇರೆ ಯಾವದೂ ಕಾರಣವಲ್ಲ. ಕ್ವಾಪಿ=ಎಲ್ಲಿಯೂ ವಿಷ್ಣುವಿನಿಂದ ಇತರಕ್ಕೆ ಜಗತ್ಕಾರಣತ್ವವು ಕಂಡುಬಂದಿಲ್ಲ. ಸ್ವಾತಂತ್ರ್ಯಾತ್= ಸ್ವತಂತ್ರನಾದುದರಿಂದ ಸರ್ವಕರ್ತೃತ್ವಾತ್ ಸರ್ವಕರ್ತೃವಾಗಿರುವದರಿಂದ ಹರಿಃ= ಪರಮಾತ್ಮನು ಪೂರ್ಣಗುಣಃ= ಗುಣಗಳಿಂದ ಪರಿಪೂರ್ಣನಾಗಿರುವನು. ಇದು ಶ್ರುತಿಸಿದ್ಧವಾದ ಪ್ರಮೇಯ, ನಾಯುಕ್ತಂ ತದ್ವದೇಚ್ಛ್ರುತಿಃ=ಶ್ರುತಿಯು ಯುಕ್ತಿಗೆ ವಿರುದ್ಧವಾದುದನ್ನು ಹಾಗೂ ಅಯುಕ್ತವಾದುದನ್ನು ಎಂದಿಗೂ ಹೇಳಲಾರದು.

**ಪಾದಾರ್ಥ ಸಂಗ್ರಹ :** ಪ್ರಥಮಾಧ್ಯಾಯದಲ್ಲಿ ಸರ್ವ ಶಬ್ದ ಸಮನ್ವಯವನ್ನು ಸಮರ್ಥಿಸುವದರ ಮೂಲಕ ಪರಮಾತ್ಮನೇ ಅನಂತ ಕಲ್ಯಾಣ ಗುಣ ಪರಿಪೂರ್ಣನು ಎಂಬ ಪ್ರಮೇಯವು ಸಿದ್ಧವಾಯಿತು ಈ ವಿಷಯದಲ್ಲಿ ಯಾವ ವಿರೋಧವೂ ಸಂಭವಿಸುವುದಿಲ್ಲವೆಂಬುದನ್ನು ದ್ವಿತೀಯಾಧ್ಯಾಯದಲ್ಲಿ ಸಮರ್ಥಿಸಿ ಪರಮಾತ್ಮನ ಅನಂತಗುಣಪೂರ್ಣತ್ವವನ್ನು ಸ್ಥಿರೀಕರಿಸುವರು. ಗುಣಪೂರತ್ವ ವಿಷಯದಲ್ಲಿ ಸಂಭವಿಸಬಹುದಾದ ವಿರೋಧ ಪರಿಹಾರಕ್ಕಾಗಿ ಈ ಅಧ್ಯಾಯ ಪ್ರವೃತ್ತವಾಗಿರುವದರಿಂದ ಇದಕ್ಕೆ ಅವಿರೋಧಾಧ್ಯಾಯವೆನ್ನುವರು. ಗುಣಪೂರತ್ವ ವಿಷಯದಲ್ಲಿ ಸಂಭವಿಸಬಹುದಾದ ವಿರೋಧಗಳು ನಾಲ್ಕು ವಿಧವಾಗಿರುವವು—ಯುಕ್ತಿ ವಿರೋಧ, ಸಮಯ ವಿರೋಧ, ಶ್ರುತಿ ವಿರೋಧ ಮತ್ತು ಯುಕ್ತಿ ಸಹಿತ ಶ್ರುತಿ ವಿರೋಧ. ಇವುಗಳಲ್ಲಿ ಪ್ರಥಮವಾಗಿ ಈಗ ಪ್ರಸಕ್ತವಾದ ದ್ವಿತಿಯಾಧ್ಯಾಯದ ಪ್ರಥಮ ಪಾದದಲ್ಲಿ ಯುಕ್ತಿ ವಿರೋಧವನ್ನು ಪರಿಹಾರ ಮಾಡಿರುವರು, ಇದಕ್ಕೆ ಪ್ರಸಕ್ತವಾದ ವ್ಯಾಖ್ಯಾನವನ್ನು ಶ್ರೀಮದಾಚಾರ್ಯರು ಮೇಲಿನ ಶ್ಲೋಕಗಳಿಂದ ನಿರೂಪಿಸಿರುವರು.

ಅಪೌರುಷೇಯತ್ವ ಸ್ವತಃ ಪ್ರಾಮಾಣ್ಯರೂಪ ಲೋಕ ವಿಲಕ್ಷಣಗುಣಗಳಿಂದ ಕೂಡಿರುವದರಿಂದ ವೇದವು ಪರಮ ಪ್ರಮಾಣವಾಗಿದೆ. ಅದರಂತೆ

ವಾಗಿ ಪರಿಹಾರ ಮಾಡುವರ ಜೊತೆಯಲ್ಲಿ, ಪರಮಾತ್ಮನೇ ಜಗದುತ್ಪತ್ತಿಗೆ ಕಾರಣನು. ಅವನೇ ಲಯಕ್ಕೂ ಕಾರಣನು, ಉತ್ಪತ್ತಿವಿನಾಶರಹಿತನಾದ ಅವನೇ ಸ್ವತಂತ್ರಕರ್ತನು, ಜೀವನು ಪರನಿಂದ ಭಿನ್ನನಿದ್ದು ಪರಮಾತ್ಮನ ಪ್ರತಿಬಿಂಬನಾಗಿದ್ದಾನೆ. ಪರಮಾತ್ಮನು ಜೀವನ ಉದ್ಧಾರಕ್ಕಾಗಿ ಅನೇಕರೂಪ ಧಾರಣ ಮಾಡಿದ್ದಾನೆ. ಎಲ್ಲ ರೂಪಗಳಲ್ಲಿಯೂ ಪರಮಾತ್ಮನು ಸಮನು. ಸ್ವಗತಭೇದವರ್ಜಿತನು ಇವೇ ಮುಂತಾದ ಗುಣಪೂರ್ಣತ್ವ ಸಾಧಕಗಳಾದ ಪ್ರಮೇಯಗಳನ್ನು ಸಮರ್ಥಿಸಿರುವರು. (ಇತಿ ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ)

**ಮುಖ್ಯಪ್ರಾಣಶ್ಚೇಂದ್ರಿಯಾಣಿ, ದೇಹಶ್ಚೈವ ತದುದ್ಭವಃ ।**
**ಮುಖ್ಯ ಪ್ರಾಣವಶೇ ಸರ್ವಂ, ಸವಿಷ್ಣೋರ್ವಶಗ ಸದಾ ॥೭॥**
**ಸರ್ವದೋಷೋಜ್ಝಿತ ತಸ್ಮಾತ್ ಭಗವಾನ್ ಪುರುಷೋತ್ತಮು ।**
**ಉಕ್ತಾ ಗುಣಾಶ್ಚಾ ವಿರುದ್ಧಾ, ಸ್ತಸ್ಯ ವೇದೇನ ಸರ್ವಶ ॥೮॥**

**ಇತಿ ಶ್ರೀಮತ್ ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಾಣುಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ದ್ವಿತೀಯೋಧ್ಯಾಯಃ ।**

ಪ್ರತಿಪದಾರ್ಥ — ಮುಖ್ಯಪ್ರಾಣಶ್ಚ = ಮುಖ್ಯ ಪ್ರಾಣನು ತದುದ್ಭವಃ = ಪರಮಾತ್ಮನಿಂದ ಉತ್ಪತ್ತಿಯುಳ್ಳವನಾಗಿರುವನು. ಇಂದ್ರಿಯಾಣಿ = ಇಂದ್ರಿಯಗಳೂ ದೇಹಶ್ಚೈವ = ಅದರಂತೆ ದೇಹಾದಿಗಳೂ ಸಹ, ನಾಮರೂಪಾತ್ಮಕ ಪ್ರಪಂಚವು ತದುದ್ಭವಃ = ಪರಮಾತ್ಮನಿಂದಲೇ (ಪರಮಾತ್ಮನ ಅಧೀನವಾಗಿಯೇ) ಉತ್ಪತ್ತಿಯನ್ನು ಹೊಂದುವವು. ಸರ್ವಂ = ರುದ್ರಾದಿ ಸಮಸ್ತ ಪ್ರಪಂಚವು ಮುಖ್ಯಪ್ರಾಣವಶೇ = ಮುಖ್ಯಪ್ರಾಣನ ವಶದಲ್ಲಿ ಇರುವವು. ಸಃ = ಆ ಮುಖ್ಯ ಪ್ರಾಣನು ಸದಾ = ಯಾವಾಗಲೂ ವಿಷ್ಣೋಃ — ಪರಮಾತ್ಮನ ವಶಗಃ = ಅಧೀನದಲ್ಲಿರುವನು. ತಸ್ಮಾತ್ = ಇದುವರೆಗೆ ಪ್ರತಿಪಾದನ ಮಾಡಿದಂತೆ, ಶ್ರುತಿಗಳಿಗೆ ಪರಸ್ಪರವಾಗಿ ವಿರೋಧವಿಲ್ಲದ್ದರಿಂದ ಸರ್ವದೋಷೋಜ್ಝಿತಃ = ಸರ್ವ ದೋಷಗಳಿಂದ ರಹಿತನಾಗಿರುವನು. ಆದುದರಿಂದಲೇ ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಾಗಿರುವನು. ಪುರುಷೋತ್ತಮು = ಸರ್ವೋತ್ತಮನಾಗಿರುವನು. ವೇದೇನ = ವೇದದಿಂದ ಉಕ್ತಾ = ಹೇಳಲ್ಪಟ್ಟ, ಸರ್ವಶಃ = ಸಮಸ್ತವಾದ, ತಸ್ಯ = ಆ ವಿಷ್ಣುವಿನ. ಗುಣಾ = ಜ್ಞಾನಾನಂದಾದಿ ಗುಣಗಳು, ಜಗತ್ಸೃಷ್ಟ್ಯಾದಿ ಸಕಲ ಗುಣಗಳೂ ಸಹ ಅವಿರುದ್ಧಾ = ಯುಕ್ತ್ಯಾದಿಗಳಿಂದ ಅವಿರುದ್ಧವಾಗಿರುವವು ಎಂದು ಸಿದ್ಧವಾಗುವದು.

**ಪಾದಾರ್ಥ ಸಂಗ್ರಹ :** ಯುಕ್ತಿ ಸಹಿತ ಶ್ರುತಿ ವಿರೋಧವು ನಾಲ್ಕ ನೆಯ ಪಾದದಲ್ಲಿ ಪರಿಹೃತವಾಗಿರುವದು. ಇಂದ್ರಿಯಗಳು, ಮುಖ್ಯಪ್ರಾಣ ಜ್ಯೋತಿ, ಇಂದ್ರಿಯಗಳಿಗೆ ಕಾರಣ, ನಾಮಾದಿ ಪ್ರಪಂಚಸೃಷ್ಟಿ ಈ ವಿಷಯ ಗಳಲ್ಲಿ ಸಂಭವಿಸಬಹುದಾದ ಪರಸ್ಪರ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಿ, ವೇದ ಪ್ರಾಮಾಣ್ಯ ಸಮರ್ಥನ ಪೂರ್ವಕವಾಗಿ, ಪರಮಾತ್ಮನ ಜಗತ್ಕರ್ತೃತ್ವ–ಗುಣಪರಿಪೂರತ್ವಗಳಿಗೆ ಸಂಭವಿಸಬಹುದಾದ ಯುಕ್ತಿ ಸಹಿತ ಶ್ರುತಿ ವಿರೋಧಗಳು ಇಲ್ಲಿ ದೂರ ಮಾಡಲ್ಪಟ್ಟಿವೆ.

## ದ್ವಿತಿಯಾರ್ಥ ಸಂಗ್ರಹ

"ಸರ್ವದೋಷೋಜ್ಝಿತ ...ವೇದೇನ ಸರ್ವಶಃ" ಎಂಬ ಶ್ಲೋಕದಿಂದ ಶ್ರೀಮದಾಚಾರ್ಯರು ಸಮಗ್ರ ದ್ವಿತೀಯಾಧ್ಯಾಯದ ಸಾರವನ್ನು ಸಂಗ್ರಹಿಸಿರು ವರು.

ಈ ಅಧ್ಯಾಯದಲ್ಲಿ ಯುಕ್ತಿ–ಸಮಯ–ಶ್ರುತಿ–ಯುಕ್ತ್ಯುಪೇತ ಶ್ರುತಿ ವಿರೋಧವನ್ನು ಪರಿಹಾರ ಮಾಡಿದ್ದರಿಂದ ಪ್ರಥಮಾಧ್ಯಾಯದಿಂದ ಸಿದ್ಧವಾದ ಪರಮಾತ್ಮನ ಅನಂತಗುಣಪೂರ್ಣತ್ವಕ್ಕೆ ಯಾವ ವಿರೋಧವೂ ಬರುವದಿಲ್ಲ. ಪರಮಾತ್ಮನಲ್ಲಿ ದೋಷಾರೋಪವೇ ಕೊಡುವದಿಲ್ಲವಾದ್ದರಿಂದ ಅವನು ಸರ್ವ ದೋಷಗಳಿಂದ ದೂರನೆಂಬುದು ಸ್ಪಷ್ಟವಾಗುವದು. ಆದ್ದರಿಂದ ಷಡ್ ಗುಣೈಶ್ವರ್ಯ ಸಂಪನ್ನನಾದ, ಸಕಲ ವೈಭವಯುತನಾದ, ಪುರುಷೋತ್ತಮನು ದೋಷ ಗಂಧದಿಂದ ದೂರನಾಗಿದ್ದು ಅನಂತರ ಕಲ್ಯಾಣ ಗುಣಗಳಿಂದ ಪೂರ್ಣ ನೆಂದು ದೃಢವಾಗುವದು.

ಇಲ್ಲಿ ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯರಿಂದ
ವಿರಚಿತವಾದ ಬ್ರಹ್ಮಸೂತ್ರಾಣು ಭಾಷ್ಯದಲ್ಲಿ
ದ್ವಿತೀಯಾಧ್ಯಾಯವು ಸಮಾಪ್ತವಾಯಿತು.

**ಶುಭೇನ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ ।**
**ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂ ಪದಮ್ ॥**
**ಯಾತಿ ತಸ್ಮಾದ್ ವಿರಕ್ತ: ಸನ್ ಜ್ಞಾನಮೇವ ಸಮಾಶ್ರಯೇತ್ ।**

**ಪ್ರತಿಪದಾರ್ಥ :—** ಶುಭೇನ ಕರ್ಮಣಾ= ಜೀವನು ಶುಭ (ಯಜ್ಞ ಯಾಗಾದಿ) ಕರ್ಮಗಳನ್ನು ಮಾಡುವದರಿಂದ, ಸ್ವರ್ಗಂ= ಮರಣಾನಂತರದಲ್ಲಿ ಸ್ವರ್ಗವನ್ನು ಕುರಿತು, ಯಾತಿ= ಹೋಗುತ್ತಾನೆ. (ಶುಭಕರ್ಮ ಯೋಗಾನಂತರ ದಲ್ಲಿ ಪುನ: ಭೂಮಿಗೆ ಬರುತ್ತಾನೆ) ವಿಕರ್ಮಣಾ= ನಿಷಿದ್ಧ ಕರ್ಮಗಳನ್ನು

ಮಾಡದೇ ಇರುವದರಿಂದ ಹಾಗೂ ಶ್ರುತಿ ಸ್ಮೃತಿಗಳಿರದ ವಿಧಿತವಾದ ಕರ್ಮ ಗಳಿಗೆ ವಿರುದ್ಧವಾದ ಕರ್ಮಗಳನ್ನು ಮಾಡುವದರಿಂದ, ನಿರಯಂ ಯಾತಿ= ನರಕವನ್ನು ಹೊಂದುತ್ತಾನೆ. ಮಿಥ್ಯಾಜ್ಞಾನೇನ= ಅಯಥಾರ್ಥ ಜ್ಞಾನದಿಂದ ತಮ:= ಅಂಧ ತಮಸ್ಸ(ನಿತ್ಯನರಕವ)ನ್ನು ಹೊಂದುತ್ತಾನೆ. ಜ್ಞಾನೇನೈವ= ಸರಿಯಾದ ಜ್ಞಾನದಿಂದಲೇ ಪರಂ ಪದಂ= ಶ್ರೇಷ್ಠವಾದ ಮೋಕ್ಷ ಪದವನ್ನು ಹೊಂದುತ್ತಾನೆ. ತಸ್ಮಾತ್= ಆದ್ದರಿಂದ ವಿರಕ್ತ: ಸನ್= ವೈರಾಗ್ಯಾದಿ ಸಂಪತ್ತು ಗಳಿಂದ ಕೂಡಿದವನಾಗಿ (ವಿರಕ್ತನಾಗಿ ಜ್ಞಾನಮೇವ= ಶ್ರವಣ ಮನನ ನಿದಿ ಧ್ಯಾಸನಗಳಿಂದ ಸಹಿತವಾದ ಜ್ಞಾನವನ್ನೇ ಸಮಾಶ್ರಯೇತ್= ಆಶ್ರಯ ಮಾಡಬೇಕು. (ಭಕ್ತಿಪೂರ್ವಕ ಉಪಾಸನದಿಂದ ಸಂಪಾದಿಸಬೇಕು.)

**ಪಾದಾರ್ಥ ಸಂಗ್ರಹ :** ಪ್ರಥಮ ದ್ವಿತೀಯಾಧ್ಯಾಯಗಳಿಂದ ವಿರೋಧ ಲೇಶರಹಿತವಾಗಿ ಪರಮಾತ್ಮನ ಗುಣಪೂರ್ಣತ್ವವು ಸುದೃಢವಾಗಿ ಸಿದ್ಧಾಂತಿ ಸಲ್ಪಟ್ಟಿರುವದು. ಬ್ರಹ್ಮಸ್ವರೂಪವು ಸಿದ್ಧವಾದ ಮೇಲೆ ಬ್ರಹ್ಮ ಪ್ರಾಪ್ತಿಗಾಗಿ ಮಾಡತಕ್ಕ ಸಾಧನ ಕಲಾಪವನ್ನು ತೃತೀಯಾಧ್ಯಾಯದಲ್ಲಿ ವಿವರಿಸಿರುವರು. ವಿರಕ್ತಿ–ಭಕ್ತಿ–ಉಪಾಸನಾ–ಜ್ಞಾನಗಳು ಕ್ರಮವಾಗಿ ವೈರಾಗ್ಯ ಭಕ್ತಿ ಉಪಾಸನಾ ಜ್ಞಾನವಾದದಲ್ಲಿ ವಿವರಿಸಲುಪರಮಾತ್ಮನನ್ನು ಹೊಂದಲು ವೈರಾಗ್ಯ ಆವಶ್ಯವೆಂ ಬುದನ್ನು ಸಾಧಿಸಿರುವರು.

ಜ್ಞಾನಸಾಧನೋಪಾಸನಾಂಗ ಭಕ್ತಿಯು ದೃಢವಾಗುವದಕ್ಕಾಗಿ ಜೀವನು ಮರಣಾನಂತರದಲ್ಲಿ ಹೊಂದಬಹುದಾದ ಗತ್ಯಾಗತಿಗಳು–ಸ್ವರ್ಗ–ನರಕ-ಗರ್ಭ ವಾಸಾದಿ ದುಃಖಸ್ವರೂಪವನ್ನು ವಿರಕ್ತಿ ಹುಟ್ಟುವದಕ್ಕಾಗಿ ಇಲ್ಲಿ ನಿರೂಪಣ ಮಾಡಿರುವರು. ಶುಭಕರ್ಮವನ್ನು ಮಾಡಿದವರು ಸ್ವರ್ಗಾದಿಗಳನ್ನು ಹೊಂದಿ, ಕರ್ಮಫಲವನ್ನು ಅನುಭವಿಸಿ ಭೂಮಿಗೆ ಪುನಃ ಬಂದು, ಅನ್ಯಾಭಿಮಾನಿ ಜೀವಾ ಷ್ಠಿತವಾದ ವ್ರೀಹ್ಯಾದಿಗಳ ಮುಖಾಂತರ ಪಿತೃಶರೀರವನ್ನು ಪ್ರವೇಶಿಸಿ, ರೇತಸ್ಸಿನ ಮುಖಾಂತರ ಮಾತೃಯೋನಿಯನ್ನು ಹೊಂದಿ ಗರ್ಭವಾಸಾದಿ ಅಸಹ್ಯವಾದ ದುಃಖಗಳನ್ನು–ಅನುಭವಿಸಿ ಸ್ವಯೋಗ್ಯವಾದ ದೇಹವನ್ನು ಪಡೆಯುತ್ತಾನೆ. ಕಾಮ್ಯಕರ್ಮದಿಂದ ಮೋಕ್ಷವು ದೊರೆಯುವುದಿಲ್ಲ. ಸ್ವಯೋಗ್ಯ ಕರ್ಮ ಮಾಡ ದಿದ್ದರೂ ನರಕವಾಗುವದು. ವಿರುದ್ಧಾಚರಣೆಯಿಂದಲೂ ನರಕವಾಗುವದು. ಹರಿದ್ವೇಷದಿಂದ ಮಿಥ್ಯಾಜ್ಞಾನದಿಂದ ದುಃಖಮಯವಾದ ಅಂಧಂತಮಸ್ಸಾಗು ವದು ಆದ್ದರಿಂದ ಬಹುತರ ದು:ಖನಿದಾನವಾದ ಈ ಸಂಸಾರದಲ್ಲಿ ಸುಜೀವಿಯು ವಿರಕ್ತನಾಗಿ, ಪರಮಾತ್ಮನಲ್ಲಿಯೇ ಆಸಕ್ತನಾಗಿ ಶ್ರವಣಾದಿ ಸಾಧನಗಳಿಂದ ಸರಿ

ಯಾವ ಜ್ಞಾನವನ್ನು ಹೊಂದಬೇಕೆಂದು ಶ್ರೀಮದಾಚಾರ್ಯರು "ತಸ್ಮಾದ್ವಿರಕ್ತಸ್ಸನ್ ಜ್ಞಾನಮೇವ ಸಮಾಶ್ರಯೇತ್" ಎಂಬುವದರಿಂದ ಸಂಗ್ರಹಿಸಿರುವರು. (ಇತಿ ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ)

**ಸರ್ವಾವಸ್ಥಾಪ್ರೇರಕಶ್ಚ ಸರ್ವರೂಪೇ ಷ್ವಭೇದವಾನ್ ||**
**ಸರ್ವದೇಶೇಷು ಕಾಲೇಷು ಸ ಏಕ. ಪರಮೇಶ್ವರ |**
**ತದ್ಭಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ ||**

**ಪ್ರತಿಪದಾರ್ಥ :—** ಸರ್ವಾವಸ್ಥಾ ಪ್ರೇರಕಃ= ಜೀವರ ಜಾಗ್ರದಾದಿ ಎಲ್ಲ ಅವಸ್ಥೆಗಳಿಗೂ ಪರಮಾತ್ಮನೇ ಪ್ರೇರಕನಾಗಿರುವನು. ಸರ್ವರೂಪೇಷು= ಸಕಲ ರೂಪಗಳಲ್ಲಿ ಸರ್ವದೇಶೇಷು= ಸಮಸ್ತ ದೇಶಗಳಲ್ಲಿ ಸರ್ವಕಾಲೇಷು = ಸರ್ವ ಕಾಲದಲ್ಲಿ ಸಃ = ಸರ್ವಾವಸ್ಥಾ ಪ್ರೇರಕನಾದ ಪರಮೇಶ್ವರಃ = ಪರಮಾತ್ಮನು (ಸರ್ವ ರೂಪಗಳಲ್ಲಿರತಕ್ಕ) ಏಕಃ = ಏಕಪ್ರಕಾರನಾಗಿದ್ದು ಒಬ್ಬನೇ ಆಗಿರುವನು. ಅಭೇದವಾನ್ = ಭೇದರಹಿತನಾಗಿರುವನು. (ಪರಮಾತ್ಮನ ಯಾವ ರೂಪಗಳಿಗೂ ಪರಸ್ಪರ ಭೇದವಿರುವದಿಲ್ಲ.) ತದ್ಭಕ್ತಿತಾರತಮ್ಯೇನ= ಅಧಿಕಾರಿಗಳು ಮಾಡುವ ಪರಮಾತ್ಮನಲ್ಲಿಯ ಭಕ್ತಿಯು ತರತಮ ಭಾವದಿಂದ ಕೂಡಿರುವದರಿಂದ, ತಾರತಮ್ಯಂ = ಜೀವರಲ್ಲಿಯ ಆನಂದಾದಿ ತಾರತಮ್ಯವು ವಿಮುಕ್ತಿಗಂ = ಮುಕ್ತಿಯಲ್ಲಿಯೂ ಇರುವದು.

**ಪದಾರ್ಥ ಸಂಗ್ರಹ :—** ಪರಮಾತ್ಮನಲ್ಲಿ ಅವನ ಮಹಾತ್ಮ್ಯ ಜ್ಞಾನ ಪೂರ್ವಕವಾಗಿ ಮಾಡುವ ಸ್ನೇಹಕ್ಕೆ "ಭಕ್ತಿ" ಎನ್ನುವರು. ಪರಮಾತ್ಮನ ಪ್ರಸಾದಾರ್ಥವಾಗಿ ಭಕ್ತಿಯು ಆವಶ್ಯಕಾರ್ಯವಾಗಿದೆ. ಜೀವರಿಗೆ ಪರಮಾತ್ಮ ನಲ್ಲಿ ಭಕ್ತಿ ಹುಟ್ಟಲು, ಜೀವರ ಸಕಲ ಅವಸ್ಥೆಗಳಿಗೂ ಚಲನವಲನಗಳಿಗೂ ಕಾರಣನಾದ ಪರಮಾತ್ಮನ ಮಹಾತ್ಮ್ಯ ಜ್ಞಾನವನ್ನು ಈ ಪಾದದಲ್ಲಿ ಮಾಡಿ ಕೊಡಲಾಗಿದೆ. (ಇತಿ ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದ.).

**ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಶ್ಚ ಸುರೇಶ್ವರೈಃ |**
**ಯಥಾಕ್ರಮಂ ಬಹುಗುಣ್ಯೈಃ ಬ್ರಹ್ಮಣಾತ್ವ ಹ್ಯಖಿಲೈ: ಗುಣೈಃ ||**
**ಉಪಾಸ್ಯ: ಸರ್ವವೇದ್ಯಶ್ಚ ಸರ್ವೈರಪಿ ಯಥಾಬಲಮ್ |**
**ಜ್ಞೇಯೋ ವಿಷ್ಣು ರ್ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್ ||**

**ಪ್ರತಿಪದಾರ್ಥ :—** ಶ್ರೀವಿಷ್ಣುವು "ಸತ್ = ನಿರ್ದೋಷನು ಚಿತ್= ಜ್ಞಾನ ಸ್ವರೂಪನು ಆನಂದ= ಆನಂದ ಸ್ವರೂಪನು ಆತ್ಮಾ= ಸ್ವಾಮಿಯು"

೨೭ ಓಂ ಅಶುದ್ಧಮಿತಿ ಚೇನ್ನ ಶಬ್ದಾತ್ ಓಂ

ಇರುವದಿಲ್ಲ.

|| ೧೯ || ರೇತೋಧಿಕರಣಮ್

೨೮ ಓಂ ರೇತಸ್ಸಿಗ್ಯೋಗೋಽಥ ಓಂ

19 ಜ್ಞಾನೇನೈವ ಪರಂ ಪದಂ

ಸ್ವರ್ಗದಿಂದ ಮರಳಿ ಬಂದ ಕರ್ಮಿಗೆ ಮೊದಲು ಪಿತೃ ಪ್ರವೇಶವಾಗುವದು. ಅನಂತರ ರೇತಸ್ಸಿನ ಮುಖಾಂತರ ಮಾತೃ ಪ್ರವೇಶವಾಗುವದು.

|| ೨೦ || ಯೋನ್ಯಧಿಕರಣಮ್

೨೯ ಓಂ ಯೋನೇಃ ಶರೀರಂ ಓಂ

20 ,,

ಕರ್ಮಿಯು ಪಿ ತೃ ಶ ರೀ ರ ದಿ ೦ ದ ಯೋನಿಯ ಮುಖಾಂತರ ಮಾತೃ ಶರೀರವನ್ನು ಪ್ರವೇಶಿಸಿದ ನಂತರ ಶರೀರವನ್ನು ಪಡೆಯುತ್ತಾನೆ.

ಇತಿ ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ

ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತ ಬ್ರಹ್ಮಸೂತ್ರೇಷು ತೃತೀಯಾಧ್ಯಾಯಸ್ಯ ಪ್ರಥಮಂ ಪಾದಃ || ೩ || ||೧||

|| ೧ || ಸಂಧ್ಯಾಧಿಕರಣಮ್

೧ ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ

೨ ಓಂ ನಿರ್ಮಾತಾರಂ ಚೈಕೇ ಪುತ್ರಾ

1 ಸರ್ವಾವಸ್ಥಾ ಪ್ರೇರಕಶ್ಚ

ಸ್ವಪ್ನ-ತಿರೋಧಾನ-ಜಾಗೃತ್-ಸುಪ್ತಿ-ತತ್ಪ್ರಬೋಧನ-ಮೋಹಾವಸ್ಥಾ-ಈ ಎಲ್ಲ ಜೀವರ ಬೇರೆ ಬೇರೆ ಅವಸ್ಥಾನಗಳಿಗೆ ಪರಮಾತ್ಮನೇ ಪ್ರೇರಕನು,

ದಯಶ್ಚ ಓಂ

೩ ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇ
ನಾನಭಿವ್ಯಕ್ತಸ್ವರೂಪತ್ವಾತ್ ಓಂ

೪ ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ
ಚ ತದ್ವಿದಃ ಓಂ

ಸ್ವಪ್ನವು ಸತ್ಯವೇ ಆಗಿದೆ. ಸ್ವಪ್ನದಲ್ಲಿ ತೋರುವ ಪದಾರ್ಥಗಳನ್ನು ಪರಮಾತ್ಮನು, ಜೀವರ ಮನೋಗತವಾದ ಸಂಸ್ಕಾರ ಮಾತ್ರ ಉಪಾದಾನದಿಂದ. ಸೃಷ್ಟಿಸುವನೆಂದು ಶ್ರುತಿಸ್ಮೃತಿಗಳಿರುವದರಿಂದ ಸ್ವಪ್ನಪದಾರ್ಥಗಳೂ ಸಹ ಸತ್ಯವಾಗಿವೆ. ಆದರೆ ಅಂತಃ ಪದಾರ್ಥದ ಬಾಹ್ಯತ್ವಪ್ರತೀತಿಯು ಮಾತ್ರ ಅಸತ್ಯವಾಗಿದೆ.

॥ ೨ ॥ ಪರಾಭಿಧ್ಯಾನಾಧಿಕರಣಮ್

2 ಸರ್ವಾವಸ್ಥಾ ಪ್ರೇರಕಶ್ಚ

೫ ಓಂ ಪರಾಭಿಧ್ಯಾನಾತ್ತು ತಿರೋಹಿತಂ
ತತೋಹ್ಯಸ್ಯ ಬಂಧ
ವಿಪರ್ಯಯೌ ಓಂ

ಜೀವರ ಬಂಧ ಮೋಕ್ಷಗಳಿಗೆ ಪರಮಾತ್ಮನೇ ಕಾರಣನಾಗಿರುವಂತೆ. ಬಂಧ-ನಿವೃತ್ತಿಗಳುಳ್ಳ ಸ್ವಪ್ನವು ಪರಮಾತ್ಮನಿಂದಲೇ ತಿರೋಹಿತವಾಗುತ್ತದೆ. ಬಾಹ್ಯಪದಾರ್ಥದ ಅಜ್ಞಾನದಿಂದ ಸ್ವಪ್ನ-ಜ್ಞಾನದಿಂದ ಸ್ವಪ್ನನಿವೃತ್ತಿ ಎನ್ನಬಾರದು. ಜೀವರ ಬಂಧಮೋಕ್ಷಗಳಿಗೆ ಅಜ್ಞಾನ-ಜ್ಞಾನಗಳು ನಿಮಿತ್ತಗಳಾಗಿದ್ದರೂ ಬಂಧಮೋಕ್ಷಪ್ರದನು ಪರಮಾತ್ಮನೇ ಅದರಂತೆ, ಬಾಹ್ಯ ಪದಾರ್ಥದ ಅಜ್ಞಾನ–ಜ್ಞಾನಗಳು ಸ್ವಪ್ನ–ತತ್ತಿರೋಧಾನಕ್ಕೆ ನಿಮಿತ್ತಮಾತ್ರ-ಸ್ವಪ್ನ – ತಿರೋಧಾನವನ್ನುಂಟುಮಾಡುವವನು ಪರಮಾತ್ಮನೇ.

| | | | |
|---|---|---|---|
| ॥ ೩ ॥ ದೇಹಯೋಗಾಧಿಕರಣಮ್<br>೬ ಓಂ ದೇಹಯೋಗದ್ವಾಸೋಽಪಿ | ಓಂ | 3 ಸರ್ವಾವಸ್ಥಾ ಪ್ರೇರಕಶ್ಚ | ದೇಹ ಸಂಬಂಧದಿಂದ ಸ್ಥಿತಿ (ಜಾಗ್ರದ ವಸ್ಥೆಯೂ ಕೂಡ ಪರಮಾತ್ಮನ ಇಚ್ಛೆಯಿಂದಲೇ ಆಗುತ್ತದೆ. ಅದು ಅಚೇತನವಾದ, ಅಸ್ವತಂತ್ರವಾದ ಕಾಲಾದೀನವಲ್ಲ. |
| ॥ ೪ ॥ ತದಭಾವಾಧಿಕರಣಮ್<br>೭ ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿಹ | ಓಂ | 4 ಸರ್ವಾವಸ್ಥಾ ಪ್ರೇರಕಶ್ಚ | "ಸುಷುಪ್ತಿಯೂ ಪರಮಾತ್ಮನ ಅಧೀನವಾಗಿದ್ದು. ಅದು ನಾಡಿಗಳಲ್ಲಿರತಕ್ಕ ಪರಮಾತ್ಮನಲ್ಲಿ ಸಂಭವಿಸುವದು, ಎಂಬುದು ಶ್ರುತಿಸಿದ್ಧ ವಿಷಯವಾಗಿರುವದು. |
| ॥ ೫ ॥ ಅತಃಪ್ರಬೋಧಾಧಿಕರಣಮ್<br>೮ ಓಂ ಅತಃ ಪ್ರಬೋಧೋಽಸ್ಮಾತ್ | ಓಂ | 5 ಸರ್ವಾವಸ್ಥಾ ಪ್ರೇರಕಶ್ಚ | ಜೀವನು ಪರಮಾತ್ಮನಲ್ಲಿಯೇ ಸುಪ್ತನಾಗುವದರಿಂದ, ಪರಮಾತ್ಮನಿಂದಲೇ ಎಚ್ಚರಗೊಳ್ಳುತ್ತಾನೆ. ಭೇರಿತಾಡನಾದಿಗಳು ಎಚ್ಚರವಾಗುವದರಲ್ಲಿ ನಿಮಿತ್ತಮಾತ್ರ ಎಚ್ಚರಗೊಳ್ಳುವದು ಪರಮಾತ್ಮನ ಅಧೀನವೇ ಆಗಿದೆ. |
| ॥ ೬ ॥ ಕರ್ಮಾನುಸ್ಮೃತ್ಯಧಿಕರಣಮ್<br>೯ ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ | ಓಂ | 6 ಸರ್ವಾವಸ್ಥಾ ಪ್ರೇರಕಃ ಸವಿತಃ ಪರಮೇಶ್ವರಃ । | ಸರ್ವಪ್ರಕಾಶವಾದ, ಶ್ರುತಿಸ್ಮೃತಿ-ಪ್ರಮಾಣಗಳಿರುವದರಿಂದ, ಸರ್ವಜೀವರ ಸಾರ್ವಕಾಲಿಕ ಸರ್ವಾವಸ್ಥಾ |

| ಸೂತ್ರ | | | | ಅರ್ಥ |
|---|---|---|---|---|
| | | | | ಪ್ರೇರಕನು ನಿಯಾಮಕನು ಪರಮಾತ್ಮನೊಬ್ಬನೇ ಆಗಿರುವನು. |
| ‖ ೭ ‖ ಮುಗ್ಧಾ (ಸಂಪತ್ತ್ಯ) ಧಿಕರಣಮ್ | | | | |
| ೧೦ \ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ | ಓಂ | 7 | ಸರ್ವಾವಸ್ಥಾ ಪ್ರೇರಕಶ್ಚ | "ಮೂರ್ಛಾವಸ್ಥೆಯಲ್ಲಿ ಜೀವನಿಗೆ ಪರಮಾತ್ಮನಲ್ಲಿ ಅರ್ಧಪ್ರವೇಶವಿರುವದು" ಈ ವಿಷಯವು ಪರಿಶೇಷ ಪ್ರಮಾಣದಿಂದ ಸಿದ್ಧವಾಗುವದು. ಈ ಮೂರ್ಛಾವಸ್ಥೆಗೂ ಸಹ ಪರಮಾತ್ಮನೇ ಪ್ರೇರಕನು |
| ‖ ೮ ‖ ನ ಸ್ಥಾನತೋಧಿಕರಣಮ್ | | | | |
| ೧೧ ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ | ಓಂ | 8 | ಸರ್ವರೂಪೇಷ್ವಭೇದವಾನ್ ಸರ್ವದೇಶೇಷು ಕಾಲೇಷು ಸಏಕಃ ಪರಮೇಶ್ವರಃ | "ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ." ಎಂದು ಶ್ರುತಿಯಿರುವದರಿಂದ. ದೇವಮನುಷ್ಯಾದಿ ಸ್ಥಾನಭೇದದಿಂದ ಪರಮಾತ್ಮನಿಗ ಭೇದವಿಲ್ಲ. ದೇವಮನುಷ್ಯಾದಿಗಳಿಗೆ ಪರಸ್ಪರ ಭೇದವಿದ್ದರೂ ಸಹ, ಅಲ್ಲಲ್ಲಿ ಇರುವ ಪರಮಾತ್ಮನ ರೂಪಗಳಿಗೆ ಯಾವದೇ ತರಹದ ಭೇದವಿಲ್ಲ ಎಲ್ಲ ಸ್ಥಾನಗಳಲ್ಲಿಯೂ ಇರತಕ್ಕ ಪರಮಾತ್ಮನು. ದೋಷರಹಿತನೂ, ಪರಿಪೂರ್ಣ ಕಲ್ಯಾಣಜ್ಞಾನಾನಂದಾತ್ಮಕ ಸದ್ಗುಣಗಳುಳ್ಳವನೂ ಏಕಪ್ರಕಾರ |
| ೧೨ ಓಂ ನಭೇದಾತಿ ಚೇನ್ನ ಪ್ರತ್ಯೇಕಮತದ್ವಚನಾತ್ | ಓಂ | | | |
| ೧೩ ಓಂ ಅಪಿ ಚೈವಮೇಕೇ | ಓಂ | | | |

ಕನೂ ಭೇದರಹಿತನೂ ಆಗಿರುವನು ಇಂತಹ ಪರಮಾತ್ಮನಲ್ಲಿ ಭಕ್ತಿ ಮಾಡಬೇಕು.

॥ ೯ ॥ ಅರೂಪವದಧಿಕರಣಮ್

೧೪ ಓಂ ಅರೂಪದೇವ ಹಿ ತತ್ಪ್ರಧಾನತ್ವಾತ್ ಓಂ

೧೫ ಓಂ ಪ್ರಕಾಶವಚ್ಚಾವೈಯರ್ಥ್ಯಂ ಓಂ

೧೬ ಓಂ ಆಹ ಚ ತನ್ಮಾತ್ರಂ .. ಓಂ

೧೭ ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ

9 ಸರ್ವರೂಪೇಷ್ವ ಭೇದವಾನ್

ಪ್ರಕೃತ್ಯಾದಿಗಳಿಗೆ ಪ್ರವರ್ತಕನಾಗಿ. ಪ್ರಕೃತಿಗಿಂತಲೂ ಉತ್ತಮನಾಗಿರುವದರಿಂದ ಪರಮಾತ್ಮನಿಗೆ ಪ್ರಾಕೃತರೂಪಾದಿಗಳಿಲ್ಲ. ಇದನ್ನು ತಿಳಿಸಲಿಕ್ಕಿಯೇ ಅವನನ್ನು ಶ್ರುತಿಯು 'ಅರೂಪ'ನೆಂದ. ಕರೆದಿದೆ. ಪರಮಾತ್ಮನು ಜ್ಞಾನಾನಂದಾತ್ಮಕ ಅಪ್ರಾಕೃತ ದಿವ್ಯರೂಪವುಳ್ಳವನಾಗಿರುವನು. ಆವನ ಎಲ್ಲ ರೂಪಗಳೂ ಪರಸ್ಪರ ಭೇದರಹಿತವಾಗಿಯೇ ಇರುವವು.

॥ ೧೦ ॥ ಅತಏವಾಧಿಕರಣಮ್

೧೮ ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ

10 ಸ ಏಕಃ ಪರಮೇಶ್ವರಃ

ಶ್ರುತಿಗಳು ಜೀವನಿಗೆ ಪರಮಾತ್ಮನ ಪ್ರತಿಬಿಂಬತ್ವವನ್ನೇ ಸ್ಪಷ್ಟವಾಗಿ ಹೇಳುತ್ತವೆಯಾದ್ದರಿಂದ ಜೀವರು ಪರಮಾತ್ಮನ ಪ್ರತಿಬಿಂಬರಾಗಿದ್ದಾರೆ. ಪ್ರತಿಬಿಂಬವೂ ಯಾವಾಗಲೂ ಬಿಂಬ ಸದೃಶವಾಗಿ ಬಿಂಬಾಧೀನವಾಗಿರುವದರಿಂದ ಪ್ರತಿಬಿಂಬಭೂತ

ರಾಗಿರುವ ರಮಾಬ್ರಹ್ಮಾದಿ ಸಕಲಚೇತನರೂ ಸಹ ಬಿಂಬನಾದ ಪರಮಾತ್ಮನಿಗ ಕಿಂಚಿತ್ಸದೃಶರಾದರೂ ಸಹ ಪರಮಾತ್ಮನಿಂದ ಭಿನ್ನರೇ ಆಗಿದ್ದು, ಸತ್ತಾ ಪ್ರವೃತ್ತಿ-ಪ್ರತೀತಿಗಳಲ್ಲಿ ಪರಮಾತ್ಮನ ಅಧೀನ ರಾಗಿಯೇ ಇರುವರು.

॥ ೧೧ ॥ ಅಂಬುವದಧಿಕರಣಮ್

೧೯ ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ

11 ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ

ಪರಮಾತ್ಮನೊಂದಿಗಿರುವ ಜೀವನ ಜ್ಞಾನಾನಂದಾತ್ಮಕ ಕಿಂಚಿತ್ ಸಾದೃಶ್ಯಾಭಿವ್ಯಕ್ತಿಯೇ ಜೀವನಿಗೆ ನಿತ್ಯನಿರಂತರ ಸುಖವನ್ನೀಯುವ ಫಲವಾಗಿದೆ. ಪರಮಾತ್ಮನ ಮಹಾತ್ಮ್ಯಜ್ಞಾನಪೂರ್ವಕವಾದ ಸುದೃಢಸ್ನೇಹವು (ಭಕ್ತಿಯು) ಇಂತಹ ಸಾದೃಶ್ಯಾಭಿವ್ಯಕ್ತಿಗೆ ಕಾರಣವಾಗಿರುವದರಿಂದ ನಾವು ಪರಮಾತ್ಮನಲ್ಲಿ ಅವಶ್ಯವಾಗಿ ಭಕ್ತಿಯನ್ನು ಮಾಡಬೇಕು.

॥ ೧೨ ॥ ವೃದ್ಧಿಹ್ರಾಸಾಧಿಕರಣಮ್

೨೦ ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಂ ಓಂ

12 ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ

ಮುಕ್ತಿಯಲ್ಲಿಯ ತಾರತಮ್ಯವು ಶ್ರುತಿಸ್ಮೃತಿಗಳಿಂದ ಸಿದ್ಧವಾಗುವದರಿಂದ. ಮುಕ್ತಿಸಾಧನವಾದ ಭಕ್ತಿಯಲ್ಲಿಯೂ ಸಹ ಆಧಿಕ್ಯ-ನ್ಯೂನತಾರೂಪ

೨೧ ಓಂ ದರ್ಶನಾಚ್ಚ ಓಂ

ವ್ಯದ ತಾರತಮ್ಯವನ್ನು ಅಂಗೀಕರಿಸಬೇಕು.

॥ ೧೩ ॥ ಪ್ರಕೃತೈತಾವತ್ತ್ವಾಧಿಕರಣಮ್

೨೨ ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋಬ್ರವೀತಿ ಚ ಭೂಯಃ ಓಂ

13 ; ಪರಮೇಶ್ವರಃ(ಪರಃ)

"ಪಾಲಯತಿ ..." ಇತ್ಯಾದಿ ವಿಶೇಷ ಶ್ರುತಿವಾಕ್ಯಗಳಿರುವದರಿಂದ ಪರಮಾತ್ಮನು ಈ ಪ್ರಪಂಚದ ಸೃಷ್ಟ್ಯಾ-ಸಂಹಾರಕನು ಮಾತ್ರವಲ್ಲದೆ ಪಾಲಕನೂ ಆಗಿರುತ್ತಾನೆ.

॥ ೧೪ ॥ ತದವ್ಯಕ್ತಾಧಿಕರಣಮ್

೨೩ ಓಂ ತದವ್ಯಕ್ತಮಾಹ ಹಿ ಓಂ

೨೪ ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ ಓಂ

೨೫ ಓಂ ಪ್ರಕಾಶವಚ್ಚಾವೈಶೇಷ್ಯಂ ಓಂ

೨೬ ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ

೨೭ ಓಂ ಅತೋಽನಂತೇನ ತಥಾ ಹಿ ಲಿಂಗಂ ಓಂ

14 ಪರಮೇಶ್ವರಃ (ಮೇಶ್ವರಃ)

ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂಚ ನಿಷ್ಕಲಮ್ " ಇತ್ಯಾದಿ ಶ್ರುತಿಗಳು ಪರಮಾತ್ಮನು "ಅರೂಪನು, ಅಕ್ಷರನು. ಸದಾ ಅವ್ಯಕ್ತನು ನಿಷ್ಕಲನು ಎಂದು ಸಾರುತ್ತವೆ. ಆದುದರಿಂದ ಭಕ್ತಿಮಾಡಿದರೂ ಸಹ ಪರಮಾತ್ಮನ ದರ್ಶನವಾಗುವುದಿಲ್ಲವಾದ್ದರಿಂದ ಭಕ್ತಿಯು ನಿಷ್ಫಲವೆಂದು ಶಂಕಿಸಬಾರದು. ಏಕೆಂದರೆ ಪರಮಾತ್ಮನು ಅವ್ಯಕ್ತನಾಗಿದ್ದರೂ ಸಹ ತನ್ನ ಭಕ್ತರಿಗೆ. ಭಕ್ತಿವಶನಾಗಿ ತನ್ನ ಅಚಿಂತ್ಯಾದ್ಭುತಶಕ್ತಿಯಿಂದ ವ್ಯಕ್ತನಾಗಿ, ಅವರಿಗ ದರ್ಶನವನ್ನು ಕೊಡುವನು. ಆದ್ದರಿಂದ ಆವಶ್ಯವಾಗಿ ಪರಮಾತ್ಮನಲ್ಲಿ ಭಕ್ತಿಮಾಡಬೇಕು,

॥ ೧೫ ॥ ಅಹಿಕುಂಡಲಾಧಿಕರಣಮ್

೨೮ ಓಂ ಉಭಯವ್ಯಪದೇಶಾತ್ತ್ವಹಿ ಕುಂಡಲವತ್ ಓಂ

೨೯ ಓಂ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ಓಂ

೩೦ ಓಂ ಪೂರ್ವವದ್ವಾ ಓಂ

೩೧ ಓಂ ಪ್ರತಿಷೇಧಾಚ್ಚ ಓಂ

15 ಏಕಃ ಪರಮೇಶ್ವರಃ ಆನಂದೋಬ್ರಹ್ಮ " ಆನಂದಂಬ್ರಹ್ಮಣಃ ಇತ್ಯಾದಿ ಶ್ರುತಿಗಳಲ್ಲಿ ಶ್ರೀ ಹರಿಗೆ ಆನಂದಾದಿ ಗುಣಸ್ವರೂಪತ್ವ ಮತ್ತು ಆನಂದಾದಿಗುಣ ವಿಶಿಷ್ಟತ್ವರೂಪ ಉಭಯ ವ್ಯಪದೇಶ (ಎರಡು ರೀತಿಯಿಂದ ಹೇಳುವದು) ಕಂಡು ಬರುವದರಿಂದ ಪರಮಾತ್ಮನು ಆನಂದಾದಿಗುಣಾತ್ಮಕನು, ಮತ್ತು ಆನಂದಾದಿಗುಣವುಳ್ಳವನು ಎಂದು ಸಿದ್ಧವಾಗುವದು. ಇದಕ್ಕೆ ಲೌಕಿಕ ದೃಷ್ಟಾಂತವೆಂದರೆ-ಸೂರ್ಯ -ಸೂರ್ಯನು ಪ್ರಕಾಶ ಸ್ವರೂಪನೂ ಆಗಿದ್ದಾನೆ. ಹಾಗೂ ಪ್ರಕಾಶಾಶ್ರಯನೂ ಆಗಿದ್ದಾನೆ" ಅದರಂತೆ ಪರಮಾತ್ಮನು ಆನಂದಾದಿಗುಣಸ್ವರೂಪನು ಹಾಗೂ ಆಶ್ರಯನೂ ಆಗಿರುವನಾದ್ದರಿಂದ ಅವನಲ್ಲಿ ಭಕ್ತಿಯನ್ನು ಮಾಡಬೇಕು" ಏಕಮೇವಾ ದ್ವಿತೀಯಂಬ್ರಹ್ಮನೇಹನಾನಾಸ್ತಿಕಿಂಚನ"ಇತ್ಯಾದಿ ಶ್ರುತಿಗಳು ಪರಮಾತ್ಮನಿಗೂ ಅವನಗುಣಗಳಿಗೂ ಅಭೇದವನ್ನು ಬೋಧಿಸುತ್ತವೆ.

|| ೧೬ || ಪರಮತೋಧಿಕರಣಮ್

೩೨ ಪರಮತಃ ಸೇತೂನ್ಮಾನಸಂಬಂಧ
ಭೇದವ್ಯಪದೇಶೇಭ್ಯಃ ಓಂ

೩೩ ಓಂ ದರ್ಶನಾತ್ತು ಓಂ

೩೪ ಓಂ ಬುದ್ಧ್ಯರ್ಥಂ ಪಾದವತ್ ಓಂ

16 ಸ ಏಕಃ ಪರಮೇಶ್ವರಃ

“ಏಷಸೇತುಃ....” ಇತ್ಯಾದಿ ಶ್ರುತಿಗಳಲ್ಲಿ, ಪರಮಾತ್ಮನ ಆನಂದಾದಿಗಳಲ್ಲಿ, ಲೌಕಿಕ- ಆನಂದಾದಿಗಳಲ್ಲಿ ಅಸಂಭಾವ್ಯಮಾನವಾದ, ಸೇತುತ್ವ ಉನ್ಮಾನತ್ವಶಬ್ದಿತ-ಪೂರ್ಣತ್ವ ಬಿಂಬತ್ವ ಲೋಕ ವಿಲಕ್ಷಣ ಅದೃಷ್ಟತ್ವ. ಅವ್ಯಪದೇಶ್ಯತ್ವಾದಿ ಧರ್ಮಗಳು ಹೇಳಲ್ಪಟ್ಟಿರುವದರಿಂದ, ಪರಮಾತ್ಮನ ಆನಂದಾದಿಗುಣಗಳು, ಅಖಿಲ ಲೌಕಿಕ–ಗುಣ ವಿಲಕ್ಷಣಗಳಾಗಿವೆ, ಪ್ರತಿಯೊಂದು ಗುಣವೂ ಸರ್ವಗುಣಸ್ವರೂಪವಾಗಿದ್ದು ಸರ್ವ ವ್ಯಾಪಾರ ಮಾಡಲು ಸಮರ್ಥವಾಗಿದೆ.

|| ೧೭ || ಸ್ಥಾನವಿಶೇಷಾದಿಕರಣಮ್

೩೫ ಓಂ ಸ್ಥಾನವಿಶೇಷಾತ್ಪ್ರಕಾಶಾದಿವತ್ ಓಂ

೩೬ ಓಂ ಉಪಪತ್ತೇಶ್ಚ ಓಂ

17 ಸ ಏಕಃ ಪರಮೇಶ್ವರಃ

ಬ್ರಹ್ಮಾದಿಗಳ ಆನಂದಾದಿಗಳು ವಿಚಿತ್ರ (ತಾರತಮ್ಯಯುಕ್ತ)ಗಳಾಗಿದ್ದರೂ ಸಹ, ಅವಿಚಿತ್ರವಾದ ಪರಮಾತ್ಮನ ಆನಂದಾದಿಗಳಿಗೆ ಪ್ರತಿಬಿಂಬಗಳಾಗಿವೆ, ಬಿಂಬನಾದ ಸೂರ್ಯನು ಒಬ್ಬನೇ ಆಗಿದ್ದರೂ, ಸೂರ್ಯಕಾಂತಾದಿ ಸ್ಥಾನವಿಶೇಷಗತ ಸೂರ್ಯ ಪ್ರತಿಬಿಂಬದಲ್ಲಿ ಅಗ್ನಿಜನಕತ್ವಾದಿ ವೈಚಿತ್ರ್ಯವು ಕಂಡು ಬರುವಂತೆ, ಪರಮಾತ್ಮನ

|| ೧೮ || ತಥಾನ್ಯದಧಿಕರಣಮ್
೩೭ ಓಂ ತಥಾನ್ಯತ್ರತಿಷೇಧಾತ್ ಓಂ

೪ ಸ ಏಕಃ ಪರಮೇಶ್ವರಃ

ಆನಂದಾದಿಗಳು ಏಕಪ್ರಕಾರವಾಗಿ ಅವಿಚಿತ್ರಗಳಾಗಿದ್ದರೂ ಸಹ, ಬ್ರಹ್ಮಾದಿಚೇತನ ಸ್ಥಾನಗತ ಭಕ್ತ್ಯಾದಿಗುಣವೈಚಿತ್ರ್ಯದಿಂದ, ಭಗವದಾನಂದಾದಿಪ್ರತಿಬಿಂಬಗಳಾದ ಬ್ರಹ್ಮಾದಿಗಳ ಆನಂದಾದಿಗಳಲ್ಲಿ ವೈಚಿತ್ರ್ಯವು ಉಪಪನ್ನವಾಗುತ್ತದೆ.

ಬಿಂಬ–ಪ್ರತಿಬಿಂಬರಲ್ಲಿಯ ಆನಂದಾದಿಗಳಲ್ಲಿ ವೈಚಿತ್ರ್ಯವಿರುವಂತೆ, ಧ್ಯೇಯ ಪ್ರತಿಮೆಗೂ ಮತ್ತು ಪರಮಾತ್ಮನಿಗೂ ವೈಲಕ್ಷಣ್ಯವಿರುವದು. ಧ್ಯಾನಮಾಡುವವರ ಯೋಗ್ಯತಾಭೇದ, ದೌರ್ಬಲ್ಯಗಳಿಂದಾಗಿ, ಧ್ಯಾನಕಾಲದಲ್ಲಿ ಪ್ರತೀತವಾದ ಪರಮಾತ್ಮನ ರೂಪದಲ್ಲಿ, ಪ್ರಾಕೃತತ್ವ-ನಿರತಿಶಯ ಸೌಂದರ್ಯಾದ್ಯಭಾವ, ಅನಿತ್ಯತ್ವ ಮೊದಲಾದ ದೋಷಗಳು ಕಂಡು ಬರುತ್ತವೆ, ಇದು ನಿರ್ದೋಷ ದಿವ್ಯಸುಂದರ ವಿಗ್ರಹನಾದ–ಪರಮಾತ್ಮನಿಂದ ಭಿನ್ನವೆಂಬುದು ಸ್ಪಷ್ಟ, ಆದರೆ ಧ್ಯಾನಮಾಡುವನಿಗೆ ಪ್ರತೀತವಾದ ವಾಸನಾಮಯ ಪ್ರತಿಮೆಯು, ಪರಮಾತ್ಮನೇ ಆಗಿರದಿದ್ದರೂ ಆತನ ಅಧಿಷ್ಠಾನ

ವಾದುದರಿಂದ ಉಪಾಸಕನಿಗೆ ಫಲಾದಿಗಳನ್ನು ಕೊಡುವದು. ಆದ್ದರಿಂದ ಸದೋಷವಾದ ಧ್ಯೇಯ ಪ್ರತಿಮಾರೂಪತ್ವವು ಪರಮಾತ್ಮನಿಗಿಲ್ಲವಾದ್ದರಿಂದ ಪರಮಾತ್ಮನು ಅವ್ಯಕ್ತನಾಗಿ ಭಕ್ತಿಮಾತ್ರ ಗಮ್ಯನಾಗಿದ್ದಾನೆ.

|| ೧೯ || ಅನೇನಸರ್ವಗತತ್ವಾಧಿಕರಣಮ್

೩೮ ಓಂ ಅನೇನ ಸರ್ವಗತತ್ವಮಾಯಾ ಮಯಶಬ್ದಾದಿಭ್ಯಃ ಓಂ

19 ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ

ತನ್ನ ಸ್ವರೂಪಭೂತವಾದ ನಿತ್ಯಶಕ್ತಿಯುಳ್ಳ ಮಾಯಾರೂಪ ಐಶ್ವರ್ಯದಿಂದ ಪರಮಾತ್ಮನು ಎಲ್ಲ ದೇಶದಲ್ಲಿಯೂ ಎಲ್ಲ ಕಾಲದಲ್ಲಿಯೂ ಸ್ವತಂತ್ರನಾಗಿಯೇ ಇರುವವನಾಗಿ ಸರ್ವಕಾಲಗಳಲ್ಲಿ ಸರ್ವವಸ್ತುಗಳನ್ನು ಒಬ್ಬನೇ ಸೃಷ್ಟಿಸುತ್ತಾನೆ.

|| ೨೦ || ಫಲಾಧಿಕರಣಮ್

೩೯ ಓಂ ಫಲಮತ ಉಪಪತ್ತೇಃ ಓಂ

೪೦ ಓಂ ಶ್ರುತತ್ವಾಚ್ಚ ಓಂ

೪೧ ಓಂ ಧರ್ಮಂ ಜೈಮಿನಿರತ ಏವ ಓಂ

೪೨ ಓಂ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ಓಂ

20 ಸ ಏಕಃ ಪರಮೇಶ್ವರಃ

ಕರ್ಮಗಳು ಜಡವಾದ್ದರಿಂದ ಅವು ಸ್ವತಃ ಫಲವನ್ನು ಕೊಡುವದರಲ್ಲಿ ಸಮರ್ಥವಲ್ಲ. ಈಶ್ವರನು ಕರ್ಮಗಳನ್ನು ನಿಮಿತ್ತಮಾಡಿಕೊಂಡು ಫಲವನ್ನು ಕೊಡುತ್ತಾನೆ. ಜೀವಕೃತ ಪುಣ್ಯವಿಶೇಷದಿಂದ ಪುಣ್ಯಲೋಕವನ್ನೂ, ಪಾಪವಿಶೇಷದಿಂದ ನರಕಾದಿಗಳನ್ನು ಹೊಂದಿಸುವವನು ಪರಮಾತ್ಮನೇ ಆದ್ದ

ರಿಂದ ಪರಮಾತ್ಮನಲ್ಲಿ ಭಕ್ತಿಯನ್ನು ಅವಶ್ಯವಾಗಿ ಮಾಡಬೇಕು.

|| ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತ ಬ್ರಹ್ಮಸೂತ್ರೇಷು ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದಃ ||೩|| ||೨||

|| ೧ || ಸರ್ವವೇದಾಂತಾಧಿಕರಣಮ್

೧ ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ

೨ ಓಂ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ

೩ ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಓಂ

೪ ಓಂ ಸಲಿಲವಚ್ಚ ತನ್ನಿಯಮಃ ಓಂ

೫ ಓಂ ದರ್ಶಯತಿ ಚ ಓಂ

1 ಸರ್ವವೇದೈಶ್ಚ ಸರ್ವೈರಪಿಯಥಾ ಬಲಂ ವಿಷ್ಣುಃ ಜ್ಞೇಯಃ

"ಸ್ವಾಧ್ಯಾಯೋ ಅಧ್ಯೇತವ್ಯಃ..." ಇತ್ಯಾದಿ ಸರ್ವಾಧಿಕಾರಿಸಾಧಾರಣವಿಧಿವಾಕ್ಯಗಳಿರುವದರಿಂದ ಸರ್ವಅಧಿಕಾರಿಗಳೂ ಸರ್ವವೇದಗಳನ್ನು ಯಥಾಶಕ್ತಿ ಅಧ್ಯಯನ ಮಾಡಿ ಬ್ರಹ್ಮಜ್ಞಾನವನ್ನು ಸಂಪಾದಿಸಿ ಕೊಳ್ಳಬೇಕು. ಪರಮಾತ್ಮನು ಯಥಾಶಕ್ತಿ ಸರ್ವ ವೇದ ವಿಷಯಕವಾದ ಶ್ರವಣಾದಿಗಳಿಂದ ಉತ್ಪನ್ನ ವಾದ ನಿರ್ಣಯ ಜನ್ಯಜ್ಞಾನವಿಷಯನಾಗಿರುವನು.

|| ೨ || ಉಪಸಂಹಾರಾಧಿಕರಣಮ್

೬ ಓಂ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ ಓಂ

2 ಬ್ರಹ್ಮಣೌತ್ಪತ್ತಿಕೈಃ ಗುಣೈಃ

ವಿಧಿವಿಹಿತವಾದ ಸಂಧ್ಯಾವಂದನಾದಿ ಕರ್ಮಗಳನ್ನು ಅವಶ್ಯವಾಗಿ ಮಾಡುವಂತೆ, ಸರ್ವವೇದಾರ್ಥ ಭೂತವಾದ, ಆನಂದಾದಿಗುಣಗಳನ್ನೂ ಹಾಗೂ ಅಪಹತಪಾಪ್ಮತ್ವಾದಿ ದೋಷಾಭಾವಗಳನ್ನೂ,

೭ ಓಂ ಅನ್ಯಥಾತ್ವಂ ಶಬ್ದಾದಿ ಚೇನ್ನಾ ವಿಶೇಷಾತ್ ಓಂ

೮ ಓಂ ನವಾಪ್ರಕರಣಭೇದಾತ್ಪರೋಃ ವರೀಯಸ್ತ್ವಾದಿವತ್ ಓಂ

೯ ಓಂ ಸಂಜ್ಞಾತಶ್ಚೇತ್ತದುಕ್ತಮಸ್ತಿತು ತದಪಿ ಓಂ

(ಕೆಲವುಗಳಿಗೆ ಉಪಸಂಹಾರವಿದೆ – ಕೆಲವುಗಳಿಗೆ ಇಲ್ಲವೆಂದು ವಿಭಾಗ ಮಾಡಿದೆ) ಏಕಬುಧ್ಯಾರೋಹಣರೂಪವಾದ ಉಪಸಂಹಾರವನ್ನು ಮಾಡಿ, ಪರಮಾತ್ಮನನ್ನು ಧ್ಯಾನಿಸಬೇಕು. ಯೋಗ್ಯವಾದ ಅಂದರೆ ಪೂರ್ಣತ್ವಕ್ಕೆ ಅವಿರೋಧಿಯಾದ ಗುಣಗಳನ್ನೇ ಉಪಸಂಹರಿಸಬೇಕು. ಅಯೋಗ್ಯವಾದ ರೋದನಾದಿ ಗುಣಗಳನ್ನು ಉಪಾಸಿಸಬಾರದು. ಅಧಿಕಾರಿಗಳು ಅವರವರ ಯೋಗ್ಯತೆಗೆ ತಕ್ಕಂತೆ ಸರ್ವಗುಣ ಹಾಗೂ ಯಥಾಶಕ್ತಿ ಗುಣೋಪಸಂಹಾರ ಪೂರ್ವಕ ಪರಮಾತ್ಮನನ್ನು ಧ್ಯಾನಿಸಬೇಕು.

## ॥ ೩ ॥ ಪ್ರಾಪ್ತ್ಯಧಿಕರಣಮ್

೧೦ ಓಂ ಪ್ರಾಪ್ತೇಶ್ಚ ಸಮಂಜಸಂ ಓಂ

3 ಬ್ರಹ್ಮಣಾತ್ವಖಿಲ್ಯೈ ಗುರ್ಣೈಃ

ಸರ್ವಗುಣೋಪಸಂಹಾರ - ಅನುಪಸಂಹಾರ ಇವೆರಡೂ ಜೀವರ ಯೋಗ್ಯತಾವಿಶೇಷದಿಂದ ಯುಕ್ತವಾಗುತ್ತವೆ. ಚತುರ್ಮುಖ ಬ್ರಹ್ಮನು ಸರ್ವಗುಣಗಳಿಂದ, ಇತರ ದೇವತೆಗಳು ಸ್ವಸಾಮರ್ಥ್ಯಕ್ಕನುಸಾರವಾಗಿ, ಮನುಷ್ಯರು ಅಲ್ಪಗುಣಗಳಿಂದ ಪರಮಾತ್ಮನನ್ನು ಉಪಾಸಿಸುತ್ತಾರೆ.

॥ ೪ ॥ ಸರ್ವಾಭೇದಾಧಿಕರಣಮ್

ಓಂ ಸರ್ವಾಭೇದಾದನ್ಯತ್ರೇಮೇ ಓಂ

4 ಬ್ರಹ್ಮಣಾತ್ವಖಿಲೈ
ಗುರ್ಣೈಃ

ಸ್ವರಗುಣೋಪಸಂಹಾರದಲ್ಲಿ ಅ ಧಿ ಕಾ ರ ವಿ ದ್ಧ ಚತುರ್ಮುಖ ಬ್ರಹ್ಮನು ಮೋಕ್ಷದಲ್ಲಿ ಸಂಪೂರ್ಣಾನಂದರೂಪವಾದ ಫಲಾಧಿತ್ಯವನ್ನು ಪಡೆಯುವನು. ಇತರರು ತಮ್ಮ ಅದಿಕಾರಕ್ಕನುಗುಣವಾಗಿ ಉಪಾಸನೆಮಾಡಿ ತಕ್ಕ ಫಲವನ್ನು ಹೊಂದುವರು.

॥ ೫ ॥ ಆನಂದಾದ್ಯಕರಣಮ್

೨ ಓಂ ಆನಂದಾದಯಃ ಪ್ರಧಾನಸ್ಯ ಓಂ

5 ಸಚ್ಚಿದಾನಂದ
ಆತ್ಮೇತಿ ಮಾನು
ಷೈಶ್ಚ ಸುರೇಶ್ವರೈಃ
ಯಧಾಕ್ರಮಂ
ಬಹುಗುರ್ಣೈಃ
ಬ್ರಹ್ಮಣಾತ್ವಖಿಲೈ
ಗುರ್ಣೈಃ ವಿಷ್ಣುಃ
ಉಪಾಸ್ಯಃ ।
ಸಚ್ಚಿದಾನಂದ
ಆತ್ಮೇತಿಚ

ಪ್ರಧಾನ ಫಲಭೂತವಾದ ಮೋಕ್ಷಕ್ಕಾಗಿ ಬ್ರಹ್ಮದೇವರ ಪರ್ಯಂತರಾದ ಮುಮುಕ್ಷು ಅಧಿಕಾರಿಗಳೆಲ್ಲರೂ ಪರಮಾತ್ಮನ ಆನಂದ-ಜ್ಞಾನ-ನಿರ್ದೋಷತ್ವ-ಆತ್ಮತ್ವರೂಪವಾದ ನಾಲ್ಕು ಗುಣಗಳನ್ನು ಧ್ಯಾನಮಾಡಲೇಬೇಕು.

॥ ೬ ॥ ಪ್ರಿಯಶಿರಸ್ತ್ವಾದ್ಯಧಿಕರಣಮ್

೩ ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚ
ಯಾಪಚಯೌ ಹಿ ಭೇದೇ ಓಂ

ಮುಕ್ತ್ಯಾನಂದದಲ್ಲಿ ಭೇದ (ತಾರತಮ್ಯ)ವಿರುವದರಿಂದ, ಗುಣೋಪಾಸನೆಯಲ್ಲಿಯೂ ತಾರತಮ್ಯವಿರುವದು. ಪರಮಾತ್ಮನ ಪ್ರಿಯಶಿರಸ್ತ್ವಾದಿ ಗುಣೋಪಾಸನೆಯು ಎಲ್ಲರಿಗೂ ಇಲ್ಲ. ಆದುದ

ರಿಂದ ಚತುರ್ಗುಣಗಳೇ ಎಲ್ಲರಿಂದಲೂ ಉಪಾಸ್ಯ ವಾಗಿವೆ.

|| ೭ || ಇತರಾಧಿಕರಣಮ್

೧೪ ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ ಓಂ

7 ಸುರೇಶ್ವೈರ್ಯಥಾ ಕ್ರಮಂ ಬಹುಗುಣೈ

ಚತುರ್ಗುಣ ಹಾಗೂ ಸರ್ವಗುಣಗಳನ್ನು ಬಿಟ್ಟರ, ಇತರ ಮಧ್ಯಮ ಗುಣಗಳು ಫಲಸಾಮಾನ್ಯ ಪ್ರಾಪ್ತಿಯ ಗೋಸ್ಕರ ದೇವಾದಿಗಳಿಂದ ಸ್ವಸ್ವ ಯೋಗ್ಯತಾನುಗುಣವಾಗಿ ಉಪಸಂಹಾರಪೂರ್ವಕ ಉಪಾಸನೆಗ ಅರ್ಹವಾಗಿವೆ. ಅಂದರೆ ದೇವಾದಿಗಳು ಚತುರ್ಗುಣಾದಿಕಗುಣಗಳಿಂದ ಪರಮಾತ್ಮನ ಉಪಾಸನೆ ಮಾಡುವರು.

|| ೮ || ಆಧ್ಯಾನಾಧಿಕರಣಮ್

೧೩ ಓಂ ಆಧ್ಯಾನಾಯ ಪ್ರಯೋಜನಾ ಭಾವಾತ್

೧೬ ಓಂ ಆತ್ಮಶಬ್ದಾಚ್ಚ

8 ಬ್ರಹ್ಮಣಾತ್ವಖಿಲೈಃ ಗುಣೈಃ

ಪರಮಾತ್ಮನ ಸರ್ವಗುಣಗಳೂ. ಪ್ರಯೋಜನಾಂತರ ರಹಿತವಾಗಿ ಉಪಸಂಹಾರ ಪೂರ್ವಕ ಧ್ಯಾನಾರ್ಥ ವಾಗಿಯೇ ಹೇಳಲ್ಪಟ್ಟಿವೆ. ವಿರಿಂಚೇತರ ಚೇತನರು ಕೆಲವು ಗುಣಗಳನ್ನು ಉಪಸಂಹಾರ ಮಾಡದೇ, ಅವರವರ ಯೋಗ್ಯತೆಗನುಸರಿಸಿ ಕೆಲವು ಗುಣಗಳನ್ನು ಉಪಸಂಹಾರಮಾಡಬೇಕು. ಆದ್ದ

| | | |
|---|---|---|
| | | ರಿಂದ ಶ್ರುತಿಗಳು ಅಧಿಕಾರಿಭೇದದಿಂದ ಉಪಸಂ-ಹಾರ ಅನುಸಂಹಾರ ಕರ್ತ್ರವ್ಯತ್ವವನ್ನು ಬೋಧಿಸುವದರಿಂದ ಉಪಾಸನೆಯು ಯುಕ್ತವಾಗಿದೆ. |
| ‖ ೯ ‖ ಆತ್ಮಗೃಹೀತ್ಯಧಿಕರಣಮ್<br>೧೭ ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ | 9 ಬ್ರಹ್ಮಣಾತ್ವಲ್ಪೈಃ ಗುರ್ಣೈಃ | ಸರ್ವಗುಣ-ಚತುರ್ಗುಣೋಪಾಸನೆಯಲ್ಲಿ ಅಶಕ್ತರಾದವರು ಆತ್ಮತ್ವ ಗುಣವನ್ನು ಮಾತ್ರ ಧ್ಯಾನ ಮಾಡಬೇಕು. ''ಅತ್ರ ಹ್ಯೇತೇ ಸರ್ವ ಏಕೀಭವಂತಿ" ಎಂಬ ಶ್ರುತಿ ಪ್ರಮಾಣದಿಂದ ಆತ್ಮ ಶಬ್ದದಿಂದ ಚತುರ್ಗುಣೋಪಾಸನಾವಿದಾಯಕ ಉಕ್ತಿಗೆ ಯಾವ ವಿರೋಧವೂ ಇಲ್ಲ. |
| ‖ ೧೦ ‖ ಅನ್ವಯಾಧಿಕರಣಮ್<br>೧೮ ಓಂ ಅನ್ವಯಾದಿತಿಚೇತ್ಸ್ಯಾದವಧಾರಣಾತ್ ಓಂ | 10 ಬ್ರಹ್ಮಣಾತ್ವಖಿಲೈಃ ಗುರ್ಣೈಃ | "ಆತ್ಮೇತ್ಯೇವ ಉಪಾಸೀತ" ಈವಿಧಿಯು ಸರ್ವಾಧಿಕಾರಕವಾಗಿದೆ. ಚತುರ್ಮುಖ ಬ್ರಹ್ಮನ ವಿಷಯದಲ್ಲಿ ಆತ್ಮಶಬ್ದದಿಂದ ಸರ್ವಗುಣಗಳನ್ನು ಇತರರ ವಿಷಯದಲ್ಲಿ ಯೋಗ್ಯತಾನುಸಾರವಾಗಿ ಗುಣಗಳನ್ನು ಗ್ರಹಣಮಾಡಬೇಕು. |
| ‖ ೧೧ ‖ ಕಾರ್ಯಾಖ್ಯಾನಾಧಿಕರಣಮ್<br>೧೯ ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ | 11 ಗುಣೈರುಪಾಸ್ಯಃ | ಧ್ಯಾನ ಕಾರ್ಯವಾದ ಮುಕ್ತಿಯು ಅಲೌಕಿಕವಾದುದರಿಂದ, ಭಗವಹತನ ಅಪ್ರಾಕೃತ ಅಲೌಕಿಕಗುಣಗಳನ್ನೇ ಧ್ಯಾನ ಮಾಡಬೇಕು. ಅಪ್ರಾಕೃತ ಅಲೌಕಿಕಗಳಾದ ಭಗವದ್ಗುಣಗಳ ಜ್ಞಾನವು ಉಪದೇಶದಿಂದ ಆಗುವದು. |

॥ ೧೨ ॥ ಸಮಾನಾಧಿಕರಣಮ್

೨೦ ಓಂ ಸಮಾನ ಏವಂ ಚಾಭೇದಾತ್ ಓಂ

೨೧ ಓಂ ಸಂಬಂಧಾದೇವ ಮನ್ಯತ್ರಾಪಿ ಓಂ

12 ಯಥಾಕ್ರಮಂ
ಉಪಾಸ್ಯಃ

ಉಪಾಸನೆಯು ಉಪಾಸಕರಿಗೆ ಸ್ವಾನು ಸಾರಿಯಾದ ಫಲವನ್ನು ಕೊಡುವುದು. ಚತುರ್ಮುಖಬ್ರಹ್ಮ-ಸರಸ್ವತೀದೇವಿಯರ ಉಪಾಸನೆಯಲ್ಲಿ ಸಮ ವಿಷಮತ್ವಗಳಿರುವದರಿಂದ ಅದರ ಫಲದಲ್ಲಿಯೂ ವೈಚಿತ್ರ್ಯವು ಕಂಡಿರುವದು. ಸರ್ವಗುಣೋಪಸಂಹಾರವು ಇಬ್ಬರಿಗೂ ಉಕ್ತವಾಗಿದ್ದರು ಸಹ ಸರಸ್ವತೀದೇವಿಯು ಬ್ರಹ್ಮನ ಗುಣಗಳನ್ನು ಕ್ರಿಯ ಸಾಮಾನ್ಯದಿಂದ ಧ್ಯಾನಿಸುತ್ತಾಳೆ. ಕ್ರಿಯವಿಶೇಷೋಪಸಂಹಾರವು ಚತುರ್ಮುಖ ಬ್ರಹ್ಮನಿಗೆ ಉಕ್ತವಾಗಿರುವುದು. ಉದಾ:- ತ್ರಿವಿಕ್ರಮತ್ವವೇ ಮೊದಲಾದ ವಿಶೇಷಗುಣಗಳಲ್ಲಿ ಸರಸ್ವತಿಯರಿಗೆ ಉಪಸಂಹಾರವು ಉಕ್ತವಾಗಿಲ್ಲ. ಅವರ ದೃಷ್ಟಿಯಲ್ಲಿ ಅವು ನಿತ್ಯ ವಿಕ್ರಮತ್ವವೇ ಮೊದಲಾದ ಗುಣಸಾಮಾನ್ಯದಲ್ಲಿ ಅಂತರ್ಗತವಾಗಿದೆ. ಬ್ರಹ್ಮಸ್ವರೂಪತ್ವಾಭಿನ್ನವಾದ ವಿಶಿಷ್ಟ ತ್ರಿವಿಕ್ರಮತ್ವಾದಿ ಗುಣಗಳನ್ನು ಚತುರ್ಮುಖಬ್ರಹ್ಮನು ಉಪಸಂಹಾರಮಾಡುತ್ತಾನೆ.

॥ ೧೩ ॥ ನಾವಿಶೇಷಾಧಿಕರಣಮ್

೨೨ ಓಂ ನವಾ ವಿಶೇಷಾತ್ ಓಂ

೨೩ ಓಂ ದರ್ಶಯತಿಚ ಓಂ

13 ಬ್ರಹ್ಮಣಾತ್ಮಖಿಲೈಃ ಗುಣೈಃ

ಆತ್ಮ ಶಬ್ದವು ಸರ್ವಗುಣಾಭಿಧಾಯಕವಾಗಿದ್ದರೂ ಸಹ ಚತುರ್ಮುಖಬ್ರಹ್ಮಾದಿಗಳಿಗೆ ಮಾತ್ರ ಆತ್ಮ ಶಬ್ದದಿಂದ ಸರ್ವಗುಣಗಳು ಸೂಚಿತವಾಗುವವು. ಇತರರಿಗೆ ಅವರವರ ಯೋಗ್ಯತಾನುಸಾರ ಉಪಾಸ್ಯ ಗುಣಗಳು ಮಾತ್ರ ತೋರುವುದರಿಂದ, ಆತ್ಮ ಶಬ್ದೋಕ್ತ ಗುಣಗಳಿಗೆ ಸರ್ವೋಪಾಸ್ಯತ್ವವು ಯುಕ್ತವಾಗಿದೆ.

॥ ೧೪ ॥ ಸಂಭೃತ್ಯಧಿಕರಣಮ್

೨೪ ಓಂ ಸಂಭೃತಿದ್ಯುವ್ಯಾಪ್ತ್ಯಪಿಚಾತ: ಓಂ

14 ಸಚ್ಚಿದಾನಂದ ಆತ್ಮೇತಿಚಃ

ಸಂಭೃತಿ (ಸಮ್ಯಗ್ ರಕ್ಷಣೆ) ದ್ಯುವ್ಯಾಪ್ತಿ (ಪ್ರಕಾಶದಿಂದ ವ್ಯಾಪ್ತವಾಗಿರುವುದು) ಗುಣಗಳು ಸರ್ವ ಮುಮುಕ್ಷುಗಳಿಂದಲೂ ಉಪಾಸ್ಯವಲ್ಲ. ಯೋಗ್ಯತಾವಿಶೇಷವುಳ್ಳ ದೇವತೆಗಳಿಂದ ಮಾತ್ರ ಉಪಾಸ್ಯವಾಗಿರುವವು.

॥ ೧೫ ॥ ಪುರುಷಾಧಿಕರಣಮ್

೨೫ ಓಂ ಪುರುಷಾವಿದ್ಯಾಯಾಮಪಿಚೇತರೇಷಾಮನಾಮ್ನಾನಾತ್ ಓಂ

15 ಬ್ರಹ್ಮಣಾತ್ಮಖಿಲೈಃ ಗುಣೈಃ

ಸರ್ವವಿದ್ಯೆಗಳಲ್ಲಿ ಅತಿಶ್ರೇಷ್ಟವಾದ ಪುರುಷ ಸೂಕ್ತ ವಿದ್ಯೆಯಲ್ಲಿಯೂ. ಸಹ ಪರಮಾತ್ಮನ ಎಲ್ಲಗುಣಗಳೂ, ಹೇಳಲ್ಪಟ್ಟಿಲ್ಲವೆಂದಮೇಲೆ ಇತರ ವಿದ್ಯೆಗಳಲ್ಲಿ ಎಲ್ಲ ಗುಣಗಳು ಹೇಳಿಲ್ಲವೆಂಬುದು ಸ್ವತ:

ಸಿದ್ಧ ಅಧಿಕಾರಿಗಳಿಗೆ ಅವಶ್ಯಕವಾದ ಸ್ವಸ್ವಾಭಿಮತ ಗುಣಗಳನ್ನು ಒಂದೇ ವಿದ್ಯೆಯಲ್ಲಿ ಹೇಳಿರಬೇಕೆಂಬ ನಿಯಮವಿಲ್ಲವಾದ್ದರಿಂದ, ಸರ್ವವೇದಾಧ್ಯಯನ ಮೂಲಕ ಯಥಾಶಕ್ತಿ ಸರ್ವಗುಣಗಳನ್ನು ತಿಳಿದು ಉಪಸಂಹಾರಮಾಡಬೇಕು.

|| ೧೬ || ವೇಧಾದ್ಯಧಿಕರಣಮ್

೨೬ ಓಂ ವೇಧಾದ್ಯರ್ಥಭೇದಾತ್ ಓಂ

16 ಸಚ್ಚಿದಾನಂದ ಆತ್ಮೇತಿಚಃ

ವೇದೋದಿತವಾದ ಭೇದನಾದಿ ಪರಮಾತ್ಮನ ಗುಣೋಪಾಸನೆಯಿಂದ ಉಂಟಾದ ಫಲವು ಯತ್ಯಾದಿಗಳಿಗೆ ಅಯೋಗ್ಯವಾದುದರಿಂದ. ಆ ಗುಣಗಳು ಸರ್ವದಿಂದಲೂ ಉಪಾಸ್ಯವಲ್ಲ ಆದ್ದರಿಂದ ಚತುರ್ಗುಣಗಳೇ ಸರ್ವೋಪಾಸ್ಯವಾಗಿವೆ.

|| ೧೭ || ಹಾನ್ಯಧಿಕರಣಮ್

೨೭ ಓಂ ಹಾನೌತೂಪಾಯನ ಶಬ್ದ
ಶೇಷತ್ವಾತ್ಕುಶಾಚ್ಛಂದ
ಸ್ತುತ್ಯುಪಗಾನವತ್ತದುಕ್ತಮ್ ಓಂ

೨೮ ಓಂ ಸಂಪರಾಯೇತರ್ತವ್ಯಾಭಾವಾತ್ತ
ಥಾಹ್ಯನ್ಯೇ ಓಂ

17 ಗುಣೈಃ ಉಪಾಸ್ಯಃ

ಸ್ವಭಾವವಿಶೇಷವಾದ ಸಂಸ್ಕಾರವೆಂಬ ಕಾರಣವಿರುವುದರಿಂದ. ಮುಕ್ತರೂ ಸಹ ಯಾವ ಫಲಾಪೇಕ್ಷೆಯಿಲ್ಲದೇ, ಫಲರೂಪವೇ ಆದ ವಾಸನೆಯನ್ನು ತಮ್ಮ ಇಚ್ಛೆಯಿಂದಲೇ ಮಾಡುವರು ಶ್ರುತಿಯಲ್ಲಿಯೂ ಸಹ ಮುಕ್ತರಿಗೆ ಮುಕ್ತಿಯಲ್ಲಿ ಸ್ವೇಚ್ಛೆಯಿಂದ ಉಪಾಸನೆಯು ವಿಹಿತವಾಗಿದೆ.

|| ೧೮ || ಛಂದಾಧಿಕರಣಮ್

೨೯ ಓಂ ಛಂದೆತಃ ಉಭಯ
ವಿರೋಧಾತ್ ಓಂ

೩೦ ಓಂ ಗತೇರರ್ಥವತ್ತ್ವಂ ಉಭಯ
ಥಾನ್ಯಥಾಹಿ ವಿರೋಧಃ ಓಂ

೩೧ ಓಂ ಉಪಪನ್ನಃ ತಲ್ಲಕ್ಷಣಾ
ರ್ಥೋಪಲಬ್ಧೇಃ ಲೋಕವತ್ ಓಂ

18 ಗುರ್ಣ್ಯೈಃ ಉಪಾಸ್ಯಃ

ಮುಕ್ತರಾದವರು ಸ್ವೇಚ್ಛೆಯಿಂದಲೇ ಕರ್ಮವನ್ನು ಮಾಡುತ್ತಾರೆ. ಮುಕ್ತರು ಕರ್ಮಸಾಧ್ಯವಾದ ಫಲವನ್ನು ಹೊಂದಿರುವುದರಿಂದ, ಮುಕ್ತಿಯಲ್ಲಿ ಕರ್ಮವನ್ನು ಮಾಡಬೇಕೆಂಬ ವಿಧಿಯಾಗಲೀ, ಕರ್ಮವನ್ನು ಮಾಡದಿದ್ದರೆ, ಪ್ರತ್ಯವಾಯವಾಗಲೀ, ಅವರಿಗೆ ಇರುವದಿಲ್ಲವಾದ್ದರಿಂದ ಮತ್ತು ಕರ್ಮ ಪ್ರವೃತ್ತಿ ಜನಕವಾದ ಕಾರಣವಿಶೇಷವು ಇಲ್ಲದಿರುವುದರಿಂದ ಮುಕ್ತರು ಮುಕ್ತಿಯಲ್ಲಿ ಕರ್ಮವನ್ನು ಮಾಡಬಹುದು. ಅಥವಾ ಮಾಡದಿರಬಹುದು ಕರ್ಮ ಮಾಡುವುದು ಅವರಿಗೆ ನಿಯತವಲ್ಲ.

|| ೧೯ || ಅನಿಯಮಾಧಿಕರಣಮ್

೩೨ ಓಂ ಅನಿಯಮಸ್ಸರ್ವೇಷಾಮ-
ವಿರೋಧಾಚ್ಛಬ್ದಾನು
ಮಾನಾಭ್ಯಾಂ ಓಂ

19 ಸರ್ವೈರುಪಾಸ್ಯಃ

ಶ್ರುತಿ ಹಾಗೂ ಶ್ರುತಿ ಮೂಲಕವಾದ ಅನುಮಾನ ಪ್ರಮಾಣವಿರುವದರಿಂದಲೂ, ಹಾಗೂ ಯಾವ ವಿರೋಧವೂ ಕುಡುಬರುವುದರಿಂದ, ಅಪರೋಕ್ಷ ಜ್ಞಾನಿಗಳೆಲ್ಲರಿಗೂ ಮುಕ್ತಿಯು ನಿಯತವಾಗಿರುವದು. ಆದ್ದರಿಂದ ನಿಃಶಂಕೆಯಿಂದ ಉಪಾಸನೆಯು ಕರ್ತವ್ಯವಾಗಿದೆ.

॥ ೨೦ ॥ ಯಾವದಧಿಕರಣಮ್

೩೩ ಓಂ ಯಾವದಧಿಕಾರಮವಸ್ಥಿತಿರಾಧಿ
ಕಾರಿಕಾಣಾಂ ಓಂ

೩೪ ಓಂ ಅಕ್ಷರಧಿಯಾಂ ತ್ವವಿರೋಧ
ಸ್ಸಾಮಾನ್ಯತದ್ಭಾವಾಭ್ಯಾ-
ಮೌಪಸವವತ್ತದುಕ್ತಂ ಓಂ

20 ಯಥಾಕ್ರಮಂ

ಮುಕ್ತಿಯಲ್ಲಿ ಆನಂದ ತಾರತಮ್ಯವು ಶ್ರುತಿ ಪ್ರಮಾಣಸಿದ್ಧವಾಗಿರುವವರಿಂದ, ಅಧಿಕಾರಾನುಸಾರವಾಗಿ ಉಪಾಸನಾದಿಗಳು ನಿಯತವಾಗಿರುವವು. ಸ್ವರೂಪಯೋಗ್ಯ ತಾನು ನಾರಿಯಾದ ಉಪಾಸನಾನು ಗುಣವಾದ ಫಲತಾರತಮ್ಯವನ್ನು ಹೊಂದಿದ ಮುಕ್ತರೆಲ್ಲರೂ ಅಕ್ಷರಬ್ರಹ್ಮನಲ್ಲಿಯೇ ಆಸಕ್ತರಾಗಿರುವದರಿಂದ. ವೈರಾಗ್ಯಪ್ರಭಾವದಿಂದ ವಿಷಯಲಂಪಟಾದಿ ದೋಷ ರಹಿತವಾಗಿರುವದರಿಂದ. ಮುಕ್ತರಲ್ಲಿ ತಾರತಮ್ಯ ಪ್ರಯುಕ್ತ ಮಾತ್ಸರ್ಯಾದಿ ದೋಷವಿರೋಧಗಳು ಇರುವದಿಲ್ಲ.

॥ ೨೧ ॥ ಇಯದಾಮನನಾಧಿಕರಣಮ್

೩೫ ಓಂ ಇಯದಾಮನನಾತ್ ಓಂ

೩೬ ಓಂ ಅಂತರಾಭೂತಗ್ರಾಮವದಿತಿ
ಚೇತ್ತದುಕ್ತಂ ಓಂ

೩೭ ಓಂ ಅನ್ಯಥಾಭೇದಾನವಪತ್ತಿರಿತಿ
ಚೇನ್ನೋಪದೇಶವತ್ ಓಂ

21 ವಿಷ್ಣುಃ ಉಪಾಸ್ಯಃ

ಅಧಿಕಾರಿತಾರತಮ್ಯವು ಪ್ರಾಣದೇವರವರಗೆ ಸೀಮಿತವಾಗಿದೆ. ಅಂದರೆ ಮುಖ್ಯ ಪ್ರಾಣನೇ ಸರ್ವ ಅಧಿಕಾರಿಗಳಲ್ಲಿ ಉತ್ತಮವಾಗಿರುವನು. ಅವನೇ ಪರಮಾತ್ಮನನ್ನು ಸರ್ವಗುಣಗಳಿಂದಲೂ ಉಪಾಸನೆ ಮಾಡುವನು

॥ ೨೨ ॥ ವ್ಯತಿಹಾರಾಧಿಕರಣಮ್

೩೮ ಓಂ ವ್ಯತಿಹಾರೋವಿಶಿಂಷಂತಿ ಹಿ ಇತರವತ್ ಓಂ

22 ವಿಷ್ಣುಃ ಉಪಾಸ್ಯಃ

"ಏ ಷ ತು ವಾ ಅತಿವದತಿ, ಯಃ ಸತ್ಯೇನಾತಿ ವದತಿ" ಇತ್ಯಾದಿ ಶ್ರುತಿಗಳಲ್ಲಿ. ಮಂತ್ರದೃಷ್ಟಾರರಿಂದ ಪ್ರಶ್ನಪ್ರತಿವಚನಾನು ಸಂಧಾನಪೂರ್ವಕವಾಗಿ, ವಿಷ್ಣುವಿಗೆ ಮುಖ್ಯಪ್ರಾಣನಗಿಂತಲೂ ಉತ್ತಮತ್ವವು ಉಕ್ತವಾಗಿರುವದರಿಂದ, ಸತ್ಯಪದವಾಚ್ಯನಾದ, ಸರ್ವೋತ್ತಮನಾದ ಶ್ರೀ ಹರಿಯೇ ಸರ್ವೋಪಾಸ್ಯನಾಗಿರುವನು.

॥ ೨೩ ॥ ಸತ್ಯಾಕಧಿರಣಮ್

೩೯ ಓಂ ಸೈವ ಹಿ ಸತ್ಯಾದಯಃ ಓಂ

23 ವಿಷ್ಣುಃ ಉಪಾಸ್ಯಃ

ಸತ್ಯಾದಿ ಸಕಲಗುಣಗಳೂ ಪರಮಾತ್ಮನ ಸ್ವರೂಪಭೂತಗಳೇ ಆದುದರಿಂದ, ಸತ್ಯಾದಿಪದವಾಚ್ಯನಾದ ಶ್ರೀ ವಿಷ್ಣು ಒಬ್ಬನೇ ಸರ್ವೋತ್ತಮನು. ಅವನೇ ಪ್ರಾಣನಿಗಿಂತಲೂ ಉತ್ತಮನಾಗಿರುವನು.

॥ ೨೪ ॥ ಕಾಮಾಧಿಕರಣಮ್

೪೦ ಓಂ ಕಾಮಾದಿತರತ್ರ ತತ್ರ ಚಾಯಯಶನಾದಿಭ್ಯಃ ಓಂ

೪೧ ಓಂ ಆದರಾದಲೋಪಃ ಓಂ

೪೨ ಓಂ ಉಪಸ್ಥಿತೇಸ್ತದ್ವಚನಾತ್ ಓಂ

24 ವಿಷ್ಣುಃ ಉಪಾಸ್ಯಃ

ಲಕ್ಷ್ಮೀದೇವಿಯು ಅಬದ್ಧಳಾಗಿರುವದರಿಂದ ಅವಳು ಅಧಿಕಾರಿವರ್ಗದಲ್ಲಿ ಸೇರುವದಿಲ್ಲ. ಆದ್ದರಿಂದ ಅಧಿಕಾರಿವರ್ಗವು ಪ್ರಾಣದೇವರ ಪರ್ಯಂತವಾಗಿಯೇ ಇರುವದು. ಅತಿಶಯಿತ ಭಗವತ್ಪ್ರಸಾದರೂಕಾರಣದಿಂದ ಲಕ್ಷ್ಮೀದೇವಿಯು ಅಬದ್ಧಳೂ, ನಿತ್ಯಮುಕ್ತಳೂ ಆಗಿದ್ದರೂ ಸಹ ಭಕ್ತಿವಿಶೇಷದಿಂದ

ಮತ್ತು ಸ್ವೇಚ್ಛೆಯಿಂದಲೇ ಯಾವಾಗಲೂ ಪರಮಾತ್ಮನ ಉಪಾಸನೆಯನ್ನು ಮಾಡುತ್ತಿರುವಳು.

|| ೨೫ || ನಿರ್ಧಾರಣಾಧಿಕರಣಮ್

೪೩ ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ ಓಂ

25 ಸರ್ವೈರಪಿ ಜ್ಞೇಯಃ

"ಆತ್ಮಾವಾರೇದೃಷ್ಟವ್ಯಃ" ಇತ್ಯಾದಿಶ್ರುತಿಯಲ್ಲಿ, ಪರಮಾತ್ಮನ ದರ್ಶನೋದ್ದೇಶವಾಗಿ ಶ್ರವಣಾದಿ ತ್ರಯವನ್ನು ವಿಧಾನ ಮಾಡಿರುವದರಿಂದ, ಶ್ರವಣ-ಮನನ-ನಿದಿಧ್ಯಾಸನ ಜನಿತವಾದ ಅಪರೋಕ್ಷಜ್ಞಾನದಿಂದಲೇ, ಪರಮಾತ್ಮನು ತನ್ನ ಇಚ್ಛಾನು ಸಾರವಾಗಿ. ಬಂಧನಿವೃತ್ತಿಯನ್ನುಂಟು ಮಾಡುವದರಿಂದ ಶ್ರವಣಾದಿ ಸಹಿತನಾಯೇ ಉಪಾಸನೆಯನ್ನು ಮಾಡಬೇಕು.

|| ೨೬ || ಪ್ರದಾನಾಧಿಕರಣಮ್

೪೪ ಓಂ ಪ್ರದಾನವದೇವ ತದುಕ್ತಂ ಓಂ

26 ಸರ್ವೈರಪಿ ಜ್ಞೇಯಃ

"ಪ್ರೀತಿ ಪೂರ್ವಕಗುರೂಪದೇಶ" ರೂಪ ಅಂಗ ಯುಕ್ತವಾದ ಶ್ರವಣಾದಿಗಳೇ ಅಪರೋಕ್ಷಜ್ಞಾನಕ್ಕೆ ಕಾರಣವಾಗುವವು, ಕೇವಲ ಶ್ರವಣಾದಿಗಳು ಅಪರೋಕ್ಷಜ್ಞಾನಕ್ಕೆ ಕಾರಣವಾಗುವದಿಲ್ಲ.

|| ೨೭ || ಲಿಂಗಭೂಯಸ್ತ್ವಾಧಿಕರಣಮ್

೪೫ ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ

27 ಸರ್ವೈರಪಿ ಜ್ಞೇಯಃ

ಪ್ರಬಲವಾದ ಬಹಳ ಕಾರಣಗಳಿರುವದರಿಂದ. ಅಪರೋಕ್ಷಜ್ಞಾನಕ್ಕೆ ಗುರುಪ್ರಸಾದವೇ ಮುಖ್ಯ

ವಾಗಿರುವದು. ಗುರುಪ್ರಸಾದಯುಕ್ತ, ರಾಗಿ ಸಚ್ಛಾಸ್ತ್ರಶ್ರವಣಾದಿಗಳನ್ನು ಮಾಡಬೇಕು.

" ೨೮ " ಪೂರ್ವವಿಕಲ್ಪಾಧಿಕರಣಮ್

೪೬ ಓಂ ಪೂರ್ವವಿಕಲ್ಪಃ ಪ್ರಕರಣಾತ್ಸ್ಯಾ-
ತ್ಕ್ರಿಯಾಮಾನಸವತ್ ಓಂ

೪೭ ಓಂ ಅತಿದೇಶಾಚ್ಚ ಓಂ

28 ಸರ್ವೈರಪಿ ಜ್ಞೇಯಃ

ಒಬ್ಬ ಗುರುಗಳನ್ನು ಆಶ್ರಯಿಸಿದ ಮೇಲೆ ಆ ಗುರುಗಳನ್ನು ಬಿಟ್ಟು ಬೇರೆ ಗುರುಗಳನ್ನು ಸ್ವೀಕಾರ ಮಾಡಬಹುದೇ ? ಎಂಬ ಶಂಕೆಗೆ ಈ ರೀತಿಯಾಗಿ ಉತ್ತರವಿರುವದು – "ಇನ್ನೊಬ್ಬ ಗುರುಗಳು ಮೊದಲಿನ ಗುರುಗಳಿಗಿಂತ, ಸಮಗ್ರ–ಅನುಗ್ರಹವನ್ನು ಮಾಡಲು ಸಮರ್ಥರಿದ್ದರೆ, ಪೂರ್ವಗುರುಗಳ ಅನುಜ್ಞೆಯಿಲ್ಲದೆ ಅವರು ಸ್ವೀಕಾರ್ಯರಾಗಿದ್ದಾರೆ ಪೂರ್ವಗುರುವಿಗೆ ಸಮರಾಗಿದ್ದರೆ ಗುರ್ವನುಜ್ಞೆಯಿಂದ ಸ್ವೀಕಾರ ಮಾಡಬಹುದು. ಅಧಮರಾಗಿದ್ದರೆ ಸ್ವೀಕಾರ ಮಾಡಲೇಬಾರದು.

" ೨೯ " ವಿದ್ಯಾಧಿಕರಣಮ್

೪೮ ಓಂ ವಿದ್ಯೈವ ತು ನಿರ್ಧಾರಣಾತ್ ಓಂ

೪೯ ಓಂ ದರ್ಶನಾಚ್ಚ ಓಂ

29 ಸರ್ವೈರಪಿ ಜ್ಞೇಯಃ

ನಾನ್ಯಃ ಪಂಥಾ ಅಯನಾಯ ವಿದ್ಯತೆ" (ಜ್ಞಾನವನ್ನು ಬಿಟ್ಟು ಮೋಕ್ಷಕ್ಕೆ ಬೇರೆಯಾವ ಉಪಾಯವೂ ಇಲ್ಲ) ಎಂದು ಸಾವಧಾರಣ ಶ್ರುತಿಯಿರುವದರಿಂದ, ಜ್ಞಾನವೇ ಮೋಕ್ಷಸಾಧನವಾಗಿ

ರುವದರಿಂದ. ಅಜ್ಞಾನಾರ್ಥವಾಗಿ ಉಪಾಸನೆ ಯನ್ನು ಮಾಡಬೇಕು.

॥ ೩೦ ॥ ಶ್ರುತ್ಯಾತ್ಯಧಿ ಕರಣಮ್

೫೦ ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ

30 ಸರ್ವೈರಪಿ ಜ್ಞೇಯಃ

ಪ್ರಬಲವಾದ ಶ್ರುತಿಗಳು–ಸ್ಮೃತಿಗಳು-ಹಾಗೂ ಯುಕ್ತಿಗಳಿಂದ ಮೋಕ್ಷವು ಜ್ಞಾನದಿಂದಲೇ ಸಾಧ್ಯ ವೆಂಬುದು ನಿಶ್ಚಿತವಾಗುವದು. ಈ ವಿಷಯದಲ್ಲಿ ಯಾವ ವಿರೋಧವೂ ಇಲ್ಲ.

॥ ೩೧ ॥ ಅನುಬಂದಾಧಿಕರಣಮ್

೫೧ ಓಂ ಅನುಬಂಧಾದಿಭ್ಯಃ ಓಂ

31 ಸರ್ವೈರಪಿ ಜ್ಞೇಯಃ

ಅನುಬಂಧಶಬ್ದದಿಂದ ಸೂಚಿತವಾದ ಹರಿ-ಗುರು ಭಕ್ತಿ - ಶಮ-ದಮಾದಿಗಳು ಬ್ರಹ್ಮದರ್ಶನಕಾಗಿ ಅವಶ್ಯವಾಗಿ, ಸಂಪಾದ್ಯವಾಗಿರುವವು. ಹರಿ-ಗುರು ಭಕ್ತಿ-ಶಮಾದಿಗಳಿಂದ ರಹಿತವಾದ ಶ್ರವಣಾದಿ ಗಳಿಂದ ಬ್ರಹ್ಮದರ್ಶನವಾಗುವುದಿಲ್ಲ

॥ ೩೨ ॥ ಪ್ರಜ್ಞಾಂತರಾಧಿಕರಣಮ್

೫೨ ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ

32 ವಿಶೇಷಸ್ತು ಜ್ಞಾನೇಸಾದುತ್ತ ರೋತ್ತರಂ

ಅವಿಚ್ಛಿನ್ನವಾದ ಪರಮಾತ್ಮನ ಉಪಾಸನೆಯಲ್ಲಿ ತಾರತಮ್ಯವಿರುವುದು. ಜ್ಞಾನದಲ್ಲಿ ತಾರತಮ್ಯ ವಿರುವುದರಿಂದ ಮೋಕ್ಷದಲ್ಲಿಯೂ ಮನುಷ್ಯರನ್ನಾ ರಂಭಿಸಿ ಬ್ರಹ್ಮದೇವರವರೆಗೆ ತಾರತಮ್ಯವು ಇರುವು ದೆಂದು ಸಿದ್ಧವಾಗುವುದು

| | | |
|---|---|---|
| ॥ ೩೩ ॥ ನ ಸಾಮಾನ್ಯಾಧಿಕರಣಮ್<br>೫೩ ಓಂ ನ ಸಾಮಾನ್ಯಾದಪ್ಯುಪಲಬ್ಧೇ<br>ರ್ಮೃತ್ಯುವನ್ನ ಹಿ ಲೋಕಾ<br>ಪತ್ತಿಃ ಓಂ | 33 ವಿಶೇಷಸ್ತು | ಎಲ್ಲ ಭಗವದ್ರೂಪಗಳೂ ಸಮಾನವಾಗಿದ್ದರೂ ಸಹ ಭಗವದ್ರೂಪದಸಾಮಾನ್ಯ ದರ್ಶನದಿಂದ ಮುಕ್ತಿ-ಯಾಗುವುದೆಂದು ಭಾವಿಸಬಾರದು ಸ್ವಬಿಂಬರೂಪ ಭಗದ್ದರ್ಶನದಿಂದಲೇ ಮುಕ್ತಿಯು ಸಾಧ್ಯವಾಗಿದೆ. ಆದ್ದರಿಂದ ಸ್ವಬಿಂಬದರ್ಶನಕ್ಕಾಗಿ ಬಿಂಬೋಪಾ-ಸನೆಯು ಅವಶ್ಯವಾಗಿದೆ |
| ॥ ೩೪ ॥ ಪರೇಣಾಧಿಕರಣಮ್<br>೫೪ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ<br>ಭೂಯಸ್ತ್ವಾನುಬಂಧಃ ಓಂ | 34 ಸರ್ವೈರಪಿ ಜ್ಞೇಯಃ | ಭಕ್ತಿಯಿಂದ ಪ್ರಸನ್ನನಾದ ಪರಮಾತ್ಮನಿಂದಲೇ ಜೀವನಿಗೆ ಅಪರೋಕ್ಷಜ್ಞಾನವಾಗುವುದು ಭಕ್ತಿಯು ಸ್ವತಂತ್ರವಾಗಿ ಅಪರೋಕ್ಷ ಜ್ಞಾನವನ್ನು ಹುಟ್ಟಿಸು ವುದಿಲ್ಲ. ಆದರೆ ಅದು ಪ್ರಧಾನ ಸಾಧನವಾಗಿದೆ. |
| ॥ ೩೫ ॥ ಏಕಾಧಿಕರಣಮ್<br>೫೫ ಓಂ ಏಕ ಆತ್ಮನಃ ಶರೀರೇಭಾವಾತ್<br>೫೬ ಓಂ ವ್ಯತಿರೇಕಸ್ತದ್ಭಾವಭಾವಿತ್ವಾನ್ನ<br>ತೂಪಲಬ್ಧಿವತ್ ಓಂ | 35 ಯಥಾಕ್ರಮಂ | ಉಪಾಸನೆಯಲ್ಲಿ ಸರ್ವರಿಗೂ ಯಾವಾಗಲೂ ಅನಾದಿ ಯಾದ ಯೋಗ್ಯತಾಪೇಕ್ಷೆಯು ಇದ್ದೇ ಇರುವುದು. ಅಂಶಾಂಶಿಗಳಿಗೆ ಅಭೇದವಿವುದರಿಂದ, ಅಂಶಿಯಾದ ಜೀವನು ತನ್ನ ಕರ್ಮನಿರ್ಮಿತ ಶರೀರದಲ್ಲಿ ಅಂಶ ರೂಪದಿಂದಲೇ ಇರುವದರಿಂದ. ಅಂಶಿಯ ಅನಾದಿ ಯಾದ ಸ್ವರೂಪಯೋಗ್ಯತೆಯೇ ಅಂಶದ ಸ್ವರೂಪ |

ಯೋಗ್ಯತೆಯಾಗಿರುವುದು. ಆದ್ದರಿಂದ ಅಂಶವು ಉತ್ಪತ್ತಿಯುಳ್ಳದ್ದರಿಂದ ಅನಾದಿಯೋಗ್ಯತೆ ಇಲ್ಲವೆಂದು ಭಾವಿಸಬಾರದು

॥ ೩೬ ॥ ಅಂಗಾವಬದ್ಧಾಧಿಕರಣಮ್

೫೭ ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ ಓಂ

೫೮ ಓಂ ಮಂತ್ರಾದಿವದ್ವಾವಿರೋಧಃ ಓಂ

36 ಸರ್ವೇಶ್ವರೈಃ (ಸಹಉಪಾಸ್ಯಃ)

ಪರಮಾತ್ಮನ ಅಂಗಗಳನ್ನು ಆಶ್ರಯಿಸಿದ ಬ್ರಹ್ಮಾದಿ ದೇವತೆಗಳನ್ನು ಪರಮಾತ್ಮನ ಪರಿವಾರವೆಂದು ಭಾವಿಸಿ, ಅಪ್ರಾಧಾನ್ಯದಿಂದ ಯಥಾಯೋಗ್ಯವಾಗಿ ಉಪಾಸಿಸಬೇಕು.

॥ ೩೭ ॥ ಭೂಮಜ್ಯಾಯಸ್ತ್ವಾಧಿಕರಣಮ್ ಓಂ

೫೯ ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶಯತಿ ಓಂ

37 ಸಚ್ಚಿದಾನಂದ ಆತ್ಮೇತಿ ವಿಷ್ಣುಃ ಉಪಾಸ್ಯಃ

ಕ್ರತುವಿನಂತೆ. ಸರ್ವಗುಣಗಳಲ್ಲಿಯೂ ಭೂಮ (ಪೂರ್ಣತ್ವ) ಗುಣವು ಇದ್ದೇ ಇರುವುದರಿಂದ ಈ ಗುಣಕ್ಕೆ ಪ್ರಾಧಾನ್ಯವಿರುವುದು. ಈ ಗುಣವು, ಸರ್ವೋಪಾಸ್ಯವಾಗಿರುವದು. ಆನಂದಾದಿಗುಣಗಳೊಂಗದಿಗೆ ಈ ಗುಣವು (ಆನಂದಾದಿಗುಣಗಳು ಪರಿಪೂರ್ಣವಾಗಿವೆಯೆಂದು) ಉಪಾಸಿತವಾಗುವುದರಿಂದಚತುರ್ಗುಣೋಪಾಸನೆಗೆ ಭಂಗ ಬರುವುದಿಲ್ಲ.

॥ ೩೮ ॥ ನಾನಾಶಬ್ದಾದ್ಯಧಿಕರಣಮ್

೬೦ ಓಂ ನಾನಾಶಬ್ದಾದಿಭೇದಾತ್ ಓಂ

38 ಯಥಾಕ್ರಮಂ ಬಹುಗುಣೈಃ

ಶಬ್ದಾದಿ ಪ್ರಮಾಣಗಳಿಂದ–ಅಧಿಕಾರಿ ಭೇದದಿಂದ, ಭೂಮಗುಣವೂ ಸರ್ವರಿಂದ ಯಥಾಯೋಗ್ಯವಾಗಿ ಉಪಾಸ್ಯವಾಗಿರುವದು, ಪರಮಾತ್ಮನು ಪರಿಪೂರ್ಣ

| | | |
|---|---|---|
| | | ವಾಗಿದ್ದರೂ ಸಹ ಅವನ ಪರಿಪೂರ್ಣತ್ವಜ್ಞಾನವು ಅಧಿಕಾರಿ ಭೇದದಿಂದ ಭಿನ್ನಭಿನ್ನವಾಗಿರುವದು. ಅದ್ದರಿಂದ ಭೂಮಗುಣವು ಅಧಿಕಾರಿಭೇದದಿಂದ ಭಿನ್ನವಾಗಿಯೇ ಉಪಾಸ್ಯವಾಗಿರುವದು. |
| ॥ ೩೯ ॥ ವಿಕಲ್ಪಾಧಿಕರಣವ್<br>೬೧ ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ಓಂ | 39 ಯಥಾಕ್ರಮ ವಿಷ್ಣುಃ ಉಪಾಸ್ಯಃ | ನಿಯತಬಿಂಬೋಪಾಸನೆಯುನ್ನು ಮಾಡುವದಲ್ಲದೆ, ನಿಯತಬಿಂಬನಿಂದ ಭಿನ್ನವಾದ ನೃಸಿಂಹಾದಿ ರೂಪುಗಳ ಉಪಾಸನೆಯುನ್ನೂ ಸಹ ದುರಿತನಿವೃತ್ಯಾದಿ ವಿಶಿಷ್ಟಫಲಕ್ಕಾಗಿ ಮಾಡಬಹುದು. |
| ॥ ೪೦ ॥ ಕಾಮ್ಯಾಧಿಕರಣಮ್<br>೬೨ ಓಂ ಕಾಮ್ಯಾಸ್ತು ಯಥಾಕಾಮಂ ಓಂ<br>ಸಮುಚ್ಚಿಯೇರನ್ನ ವಾ ಪೂರ್ವ<br>ಹೇತ್ವಭಾವಾತ್ ಓಂ | 40 ಯಥಾಕ್ರಮಂ ಬಹುಗುಣೈರ್ವಿಷ್ಣುಃ ಉಪಾಸ್ಯಃ | ಕಾಮ್ಯಸಾಧಕ ಭಗವದ್ರೂಪಗಳಲ್ಲಿ, ಕಾಮಸಾಧಕ ಭಗವದ್ಗುಣಗಳನ್ನು ಸ್ವಸ್ವಕಾರ್ಯಾನುಸಾರವಾಗಿ ಉಪಸಂಹಾರ ಮಾಡುವದು ವೈಕಲ್ಪಿತವಾಗಿರುವುದು. ಲೌಕಿಕ ಫಲೇಚ್ಚುಗಳು ಉಪಸಂಹಾರ ಮಾಡಬಹುದು. ಮುಮುಕ್ಷುಗಳಿಗೆ ಲೌಕಿಕಫಲಾಪೇಕ್ಷೆಯಿರುವದಿಲ್ಲವಾದ್ದರಿಂದ ಅವರು ಉಪಸಂ-ಹಾರ ಮಾಡಬಾರದು. ಅಥವಾ ಮುಮುಕ್ಷುಗಳೂ ಸಹ ಲೌಕಿಕ ಫಲಾಪೇಕ್ಷೆ ಇಲ್ಲದೇ ಕೇವಲ |

॥ ೪೧ ॥ ಅಂಗಾಧಿಕರಣಮ್

೬೩ ಓಂ ಅಂಗೇಷು ಯಥಾಶ್ರಯ ಭಾವಃ ಓಂ

೬೪ ಓಂ ಶಿಷ್ಟೇಶ್ಚ ಓಂ

೬೫ ಓಂ ಸಮಾಹಾರಾತ್ ಓಂ

೬೬ ಓಂ ಗುಣಸಾಧಾರಣ್ಯಶ್ರುತೇಶ್ಚ ಓಂ

॥ ೪೨ ॥ ನವಾಧಿಕರಣಮ್

೬೭ ಓಂ ನೆವಾತತ್ಸಹಭಾವಶ್ರುತೇಃ ಓಂ

೬೮ ಓಂ ದರ್ಶನಾಚ್ಚ ಓಂ

41,42 ಸುರೇಶ್ವರೈಃ
ಯಥಾಕ್ರಮಂ
ಬಹುಗುಣ್ಯೈಃ
ಸರ್ವೇವೆದ್ಯೈಶ್ಚ
ಉಪಾಸ್ಯಃ

ಪರಮಾತ್ಮನ ಪ್ರಸಾದಾರ್ಥವಾಗಿ ಉಪಸಂಹಾರ ಮಾಡಬಹುದು.

ಪರಮಾತ್ಮನು ಅಂಗಾಶ್ರಿತತ್ವೇನ (ಬ್ರಹ್ಮಾದಿ ದೇವತೆಗಳು ಪರಮಾತ್ಮನ ಅಂಗಗಳನ್ನು ಆಶ್ರ-ಯಿಸುತ್ತಾರೆಂದು) ಉಪಾಸ್ಯನಾಗಿದ್ದಾನೆ. ಶ್ರುತಿಯಲ್ಲಿ ದೇವತೆಗಳು ಮಾತ್ರ ಅಂಗದೇವತೋಪಾಸನೆಯನ್ನು ಮಾಡಬೇಕು ಇತರರು ಮಾಡಬಾರದೆಂದು ಹೇಳಿರುವುದರಿಂದ ದೇವಾನ್ಯರಿಂದ ಅಂಗದೇವತೋಪಾಸನೆಯು ಅಕರ್ತವ್ಯವಾಗಿರುವುದು.



ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತ ಬ್ರಹ್ಮಸೂತ್ರೇಷು ತೃತೀಯಾಧ್ಯಾಯಸ್ಯ ತೃತೀಯಃ ಪಾದಃ

॥ ೧ ॥ ಪುರುಷಾರ್ಥಾಧಿಕರಣಮ್

೧ ಓಂ ಪುರುಷಾರ್ಥೋऽ ಅತಃ ಶಬ್ದಾದಿತಿ ಬಾದರಾಯಣಃ ಓಂ

೨ ಓಂ ಶೇಷತ್ವಾತ್ಪುರುಷಾರ್ಥವಾದೋ ಯಥಾ ಅನ್ಯೇಷ್ವಿತಿ ಜೈಮಿನಿಃ ಓಂ

೩ ಓಂ ಆಚಾರದರ್ಶನಾತ್ ಓಂ

೪ ಓಂ ತಚ್ಛ್ರುತೇಃ ಓಂ

೫ ಓಂ ಸಮನ್ವಾರಂಭಣಾತ್ ಓಂ

೬ ಓಂ ತದ್ವತೋ ವಿಧಾನಾತ್ ಓಂ

೭ ಓಂ ನಿಯಮಾಚ್ಚ ಓಂ

೮ ಓಂ ಅಧಿಕೋಪದೇಸಾತ್ತು ಬಾದರಾಯಣ ಸ್ಯೈವಂ ತದ್ದರ್ಶನಾತ್ ಓಂ

೯ ಓಂ ತುಲ್ಯಂ ತು ದರ್ಶನಾತ್ ಓಂ

1 ಸರ್ವೇಪಿ ಪುರುಷಾರ್ಥಾಃ ಸ್ಯುರ್ಜ್ಞಾನಾದೇವ ನಸಂಶಯಃ ।

ಭಗವಜ್ಞಾನದಿಂದ ಸರ್ವ ಪುರುಷಾರ್ಥವೂ ಸಿದ್ಧಿಸುತ್ತದೆ. ಇದು "ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧ ಸತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾ ಮ ನ್, ತಸ್ಮಾದಾತ್ಮಜ್ಞಂಹ್ಯರ್ಚಯೇದ್ಭೂತಿ ಕಾಮಃ" (ಭಗವದ ಪರೋಕ್ಷ ಜ್ಞಾನಿಯು ಯಾವ ಯಾವ ಲೋಕವನ್ನು ಮಾನಸ್ಸಿನಿಂದ ಇಚ್ಛಿಪಡುತ್ತಾನೋ ಮತ್ತು ಯಾವ ಯಾವ ವಿಷಯಗಳನ್ನು ಬಯಸುತ್ತಾನೋ ಆಯಾ ಲೋಕಗಳನ್ನು ಆಯಾ ವಿಷಯಗಳನ್ನು ಅವನು ಪಡೆಯುತ್ತಾನೆ.) ಎಂಬ ಶ್ರುತಿಯಿಂದ ಸಿದ್ಧವಾಗುವುದು. ಇಲ್ಲಿ ಒಂದು ವಿಶೇಷವಿರುವುದು ದೇವಾಧಿಕಾರಿಗಳಿಗೆ ಮೋಕ್ಷ-ಮೋಕ್ಷೇತರ ಸಕಲ ಪುರುಷಾರ್ಥಗಳು ಜ್ಞಾನದಿಂದಲೇ ಆದರೂ ಸಹ ಮಾನುಷಾಧಿಕಾರಿಗಳಿಗೆ ಹಾಗೂ ಪ್ರತಿಬದ್ಧ ದೇವಾಧಿಕಾರಿಗಳಿಗೆ ಕರ್ಮದಿಂದ ಮೋಕ್ಷೇತರ ಪುರುಷಾರ್ಥಗಳು ಸಿದ್ಧಿಸುವವು.

॥ ೨ ॥ ಅಸಾರ್ವತ್ರಿಕ್ಯಾಧಿಕರಣಮ್

೧೦ ಓಂ ಅಸಾರ್ವತ್ರಿಕೀ ಓಂ

೧೧ ಓಂ ವಿಭಾಗಃ ಶತವತ್ ಓಂ

೧೨ ಓಂ ಅಧ್ಯಯನ ಮಾತ್ರವತಃ ಓಂ

2 ಸರ್ವವೇದೈಶ್ಚ ಸರ್ವೈ
ರಪಿ ಯಥಾಬಲಂ
ಜ್ಞೇಯೋ ವಿಷ್ಣುಃ

ನವಕೋಟಿದೇವತೆಗಳಿದ್ದರೂ ಸಹ ಅವರಲ್ಲಿ ಪರಾ ವರಬ್ರಹ್ಮರಿಂದ ಕೂಡಿದ ನೂರು ದೇವತೆಗಳಿಗೆ ಮಾತ್ರ ಸೋಮ ಪಾನಾಧಿಕಾರವಿರುವಂತೆ, ಅರ್ಥಿ ತ್ವಾದಿಗಳು ಎಲ್ಲ ಅಧಿಕಾರಿಗಳಿಗೂ ಸಮನಾಗಿದ್ದರೂ ಸಹ "ಅವೈಷ್ಣವಸ್ಯ ವೇದೇಪಿ ಹ್ಯಧಿಕಾರೋನ ವಿದ್ಯತೆ" "ಪಠೇದ್ವೇದಾನ್ ...." ಇತಾದಿ ಪ್ರಮಾಣಬಲದಿಂದ, ಗುರುಭಕ್ತಿ ಪುರಸ್ಸರ-ಸಾಂಗ ಸಫುಲ ಯರ್ಥಾಕ್ತಿ ಸಮಗ್ರ ವೇದಾಧ್ಯಯನ ಮಾಡಿದ ಅಧಿಕಾರಿಗಳಿಗೆ ಮಾತ್ರ ಬ್ರಹ್ಮಜ್ಞಾನದಲ್ಲಿ ಅಧಿಕಾರವಿರುವದು. ಆದ್ದರಿಂದ ಎಲ್ಲರಿಗೂ ಬ್ರಹ್ಮಜ್ಞಾನದಲ್ಲಿ ಅಧಿಕಾರವಿಲ್ಲ.

॥ ೩ ॥ ನಾವಿಶೇಷಾಧಿಕರಣಮ್

೧೩ ಓಂ ನಾವಿಶೆಷಾತ್ ಓಂ

3 – " " " –

ಎಲ್ಲ ದೇವತೆಗಳಿಗೂ ಜ್ಞಾನಾಧಿಕಾರವು ಸಮಾನ ವಾಗಿರುವುದಿಲ್ಲ. ದೇವತೆಗಳಲ್ಲಿಯೂ ತಾರತಮ್ಯ ವಿರುವುದರಿಂದ, ದೇವೋತ್ತಮರಿಗೆ ಮಾತ್ರ ಸಂಪೂರ್ಣ ಅಧಿಕಾರವಿರುವುದು.

॥ ೪ ॥ ಸ್ಮೃತ್ಯಧಿಕರಣಮ್

೧೪ ಓಂ ಸ್ಮೃತಯೋ ಅನುಮತಿರ್ವಾ ಓಂ
೧೫ ಓಂ ಕಾಮಕಾರೇಣಚೈಕೇ ಓಂ
೧೬ ಓಂ ಉಪಪರ್ದಂಚ ಓಂ
೧೭ ಓಂ ಉರ್ಧ್ವರೇತಸ್ಸುಚ ಶಬ್ದೇಹಿ ಓಂ
೧೮ ಓಂ ಪರಾಮರ್ಶಂ ಜೈಮಿನಿರಚೋದನಾ
ಚಾಪವದತಿ ಹಿ ಓಂ
೧೯ ಓಂ ಅನುಷ್ಠೇಯಂ ಬಾದೆರಾಯಣಃ
ಸಾಮ್ಯಶ್ರುತೇಃ ಓಂ
೨೦ ಓಂ ವಿಧಿರ್ವಾ ಧಾರಣವತ್ ಓಂ
೨೧ ಓಂ ಸ್ತುತಿಮಾತ್ರಮುಪಾದಾನಾದಿತಿ
ಚೇನಾಪೂರ್ವತ್ವಾತ್ ಓಂ
೨೨ ಓಂ ಭಾವಶಬ್ದಾಚ್ಚ ಓಂ
೨೩ ಓಂ ಪಾರಿಪ್ಲವಾರ್ಥಾ ಇತಿ ಚೇನ್ನ
ವಿಶೇಷಿತತ್ವಾತ್ ಓಂ
೨೪ ಓಂ ತಥಾಚೈಕವಾಕ್ಯೋಪಬಂಧಾತ್ ಓಂ
೨೫ ಓಂ ಅತಏವ ಚಾಗ್ನೀಂಧನಾದ್ಯನ
ಪೇಕ್ಷಾ ಓಂ

4 ನಲಿಪ್ಯತೆ ಜ್ಞಾನ
ವಾಂಶ್ಚ ಸರ್ವದೋಷೈ
ರಪಿ ಕ್ವಚಿತ್॥
ಗುಣದೋಷೋ
ಸುಖಸ್ಯಾಪಿ ವೃದ್ಧಿ
ಹ್ರಾಸೌ ವಿಮುಕ್ತಿಗೌ॥
ನೃಣಾಂಸುರಾಣಾಂ
ಮುಕ್ತೌತು ಸುಖಿಂ
ಕ್ಲಪ್ತಂ ಯಥಾಕ್ರಮಂ ॥

ಅಪರೋಕ್ಷಜ್ಞಾನಿಗಳಿಗೆ ಮೋಕ್ಷವು ನಿಯತವಾಗಿ ರುವದು. ಅಪರೋಕ್ಷ ಜ್ಞಾನಿಗಳಿಗೆ ಯಥೇಷ್ಟಾ ಚರಣೋಕ್ತಿಯು, ಜ್ಞಾನಸಾಮರ್ಥ್ಯ ಸ್ತುತಿರೂಪ ವಾಗಿರುವದು. ಆದರೆ ಜ್ಞಾನಿಗಳಿಗೆ ಯಥೇಷ್ಟಾ ಚರಣ ವಿಷಯದಲ್ಲಿ ಯಾವ ವಿಧಿಯೂ ಇಲ್ಲದಿರು ವದರಿಂದ ಮೋಕ್ಷವು ನಿಯತವಾಗಿದ್ದರೂ ಸಹ ಮುಕ್ತ್ಯಾನಂದಹ್ರಾಸರೂಪವಿಶೇಷ ವಿರುವದು.

೨೬ ಓಂ ಸರ್ವಾಪೇಕ್ಷಾಚ ಯಜ್ಞಾದಿ
ಶ್ರುತೇರರ್ಥವತ್ ಓಂ

೨೭ ಓಂ ಶಮದಮಾದ್ಯುಪೇತಃ ಸ್ಯಾತ್ತಥಾಪಿ
ತು ತದ್ವಿಧೇಃ ತದಂಗತಯಾ
ತೇಷಾಂ ಅವಶ್ಯಾನುಷ್ಠೇಯ
ತ್ವಾತ್ ಓಂ

೨೮ ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ
ತದ್ದರ್ಶನಾತ್ ಓಂ

೨೯ ಓಂ ಅಬಾಧಾಚ್ಚ ಓಂ

೩೦ ಓಂ ಅಪಿಸ್ಮರ್ಯತೆ ಓಂ

೩೧ ಓಂ ಶಬ್ದಾಶ್ಚಾತೋಽಕಾಮಚಾರೇ ಓಂ

೩೨ ಓಂ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ

೩೩ ಓಂ ಸಹಕಾರಿತ್ವೇನ ಚ ಓಂ

॥ ೫ ॥ ಉಭಯಲಿಂಗಾಧಿ ಕರಣಮ್

೩೪ ಓಂ ಸರ್ವಥಾಪಿ ತು ತ ಏವೋಭಯ
ಲಿಂಗಾತ್ ಓಂ

೩೫ ಓಂ ಅನಭಿಭವಂ ಚ ದರ್ಶಯತಿ ಓಂ

5 ಸರ್ವೈಃ ವಿಷ್ಣುಃ ಜ್ಞೇಯಃ

ದೇಶ–ಕಾಲ–ಗುರೂಪಸತ್ತಿ ಮುಂತಾದ ಅನೇಕ ಸಾಧನ ಸಂಪತ್ತಿಗಳು ಸಮಾನವಾಗಿದ್ದರೂ ಸಹ, ಯೋಗ್ಯರು ಮಾತ್ರ ಬ್ರಹ್ಮಜ್ಞಾನವನ್ನು ಹೊಂದುತ್ತಾರೆ. ಅಯೋಗ್ಯರು ವಿಪರೀತ ಜ್ಞಾನವನ್ನು

೩೬ ಅಂತರಾ ಚಾಪಿ ತು ತದ್ದೃಷ್ಟೇಃ ಓಂ
೩೭ ಓಂ ಅಪಿ ಸ್ಮರ್ಯತೇ ಓಂ
೩೮ ಓಂ ವಿಶೇಷಾನುಗ್ರಹಂ ಚ ಓಂ
೩೯ ಓಂ ಅತಸ್ತ್ವಿತರಜ್ಜ್ಯಾಯೋಲಿಂಗಾಚ್ಚ ಓಂ
೪೦ ಓಂ ತದ್ಭೂತಸ್ಯ ತು ತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ ಓಂ

ಹೊಂದುತ್ತಾರೆ. ಈ ವಿಷಯವು ಉಭಯವಿಧವಾದ. ನಿದರ್ಶನಗಳಿಂದ ಸಿದ್ಧವಾಗುವದು. ಇಂದ್ರವಿರೋಚನರುಗಳಿಗೆ ಬ್ರಹ್ಮೋಪದೇಶವು ಸಮಾನವಾಗಿದ್ದರೂ ಇಂದ್ರನು ಸರಿಯಾದ ಜ್ಞಾನವನ್ನು ಹೊಂದಿದನು. ವಿರೋಚನನು ವಿಪರೀತಜ್ಞಾನವನ್ನು ಹೊಂದಿದನು.

॥ ೬ ॥ ಅಧಿಕಾರಿಕಾಧಿಕರಣಮ್

೪೧ ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್ ಓಂ
೪೨ ಓಂ ಉಪಪೂರ್ವಮಪೀತ್ಯೇಕೇ ಭಾವಶಮನವತ್ತದುಕ್ತಂ ಓಂ
೪೩ ಓಂ ಬಹಿಸ್ತೂಭಯಧಾಪಿ ಸ್ಮೃತೇ-ರಾಚಾರಾಚ್ಚ ಓಂ

6 ಸರ್ವ್ವವಿಷ್ಣುಃಜ್ಞೇಯಃ

ಅಪರೋಕ್ಷ್ಣನೇಚ್ಛುವಿನಿಂದ ಸ್ವ-ಅಯೋಗ್ಯವಾದ, ಅಧಿಕಾರೀವಿಶೇಷರಿಂದ ಪ್ರಾಪ್ಯವಾದ ದೇವತಾದಿ ಪದಗಳು ಇಚ್ಛಿಸಲ್ಪಡಬಾರದು, ಅವನು ಇಚ್ಛಿಸಿದರೂ ಸಹ ಅವು ಲಭಿಸುವದಿಲ್ಲ, ಅದರಂತೆ ಭಗವದೈಶ್ವರ್ಯಾದಿಗಳನ್ನೂ ಸಹ ಯಾರೂ ಮನಸ್ಸಿನಿಂದಲೂ ಇಚ್ಛಿಸಬಾರದು. ಲೋಕದಲ್ಲಿ ಭೃತ್ಯನು ರಾಜಪದವಿಯನ್ನು ಬಯಸಿದರೆ ಅನರ್ಥವು ಸಿದ್ಧವಾಗಿರುವಂತೆ. ದೇವತಾಪದ ಭಗವದೈಶ್ವರ್ಯಾದಿಗಳನ್ನು ಇಚ್ಛಿಸಿದರೂ ಸಹ ಸ್ವಸ್ಥಾನದಿಂದ ಪತನವನ್ನು ಹೊಂದುತ್ತಾರೆ.

॥ ೭ ॥ ಸ್ವಾಮ್ಯಫಲಶ್ರುತ್ಯಧಿಕರಣಮ್

೪೪ ಓಂ ಸ್ವಾಮಿನಃ ಫಲಶ್ರುತೇ
ರಿತ್ಯಾತ್ರೇಯಃ ಓಂ

೪೫ ಓಂ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ
ಹಿ ಪರಿಕ್ರಿಯತೇ ಓಂ

೪೬ ಓಂ ಸಹಕಾರ್ಯಂತರವಿಧಿಃ ಪಕ್ಷೇಣ
ತೃತೀಯಂ ತದ್ವತೋ
ವಿಧ್ಯಾದಿವತ್ ಓಂ

॥ ೮ ॥ ಕೃತ್ಸ್ನಭಾವಾಧಿಕರಣಮ್

೪೭ ಓಂ ಕೃತ್ಸ್ನಭಾವಾತ್ತು ಗೃಹಿಣೋಪ-
ಸಂಹಾರಃ ಓಂ

೪೮ ಓಂ ಮೌನವದಿತರೇಷಾಮಪ್ಯುಪ
ದೇಶಾತ್

॥ ೯ ॥ ಅನಾವಿಷ್ಕಾರಾಧಿಕರಣಮ್

೪೯ ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ

7 ನೃಣಾಂ ಗುಣ್ಯೈಃ ಕ್ಲಪ್ತಂ ಸುಖಂ ಸುರಾಣಾಂ ಯಥಾಕ್ರಮಂ ಭವೇತ್ ।

ಸತ್ರದಲ್ಲಿ ಯಾವ ಪ್ರವರ್ತಕನಾದವನಿಗೆ ಮುಖ್ಯ ಫಲವು ಲಭಿಸಿದರೂ ಋತ್ವಿಕ್‌ಗಳಿಗೂ ಸ್ವಲ್ಪ ಫಲ ದೊರೆಯುವಂತೆ. ಜ್ಞಾನ ಸ್ವಾಮಿಗಳಾದ ತತ್ವಾಭಿಮಾನಿದೇವತೆಗಳಿಗೆ ಜ್ಞಾನಜನ್ಯ ಮುಖ್ಯ ಫಲ ಲಭಿಸಿದರೂ ಸಹ ಪ್ರಜೆಗಳಿಗೂ ಸಹ ಕರ್ತೃತ್ವನಿಮಿತ್ತವಾಗಿ ಜ್ಞಾನಜನ್ಯ ಫಲವು ದೊರೆಯುತ್ತದೆ.

8 — " —

ಯತಿಗಳು ಜ್ಞಾನ ಪ್ರಚುರರಾದುದರಿಂದ ಅವರು ಗೃಹಸ್ಥಾಶ್ರಮಿಗಿಂತಲೂ ಶ್ರೇಷ್ಠರು ದೇವತೆಗಳಿಗಿಂತಲೂ ಶ್ರೇಷ್ಠರು. "ಕುಟುಂಬೇಶುಚೌ—" ಇದೇ ಮುಂತಾದ ವೇದ ವಾಕ್ಯವೂ ಸಹ ಕೃತ್ಸ್ನಗೃಹಸ್ಥರಾದ ದೇವತೋದ್ದೇಶಕವಾಗಿಯೇ ಪ್ರವರ್ತವಾಗಿರುವದು.

9 ಸರ್ವೈಃ ವಿಷ್ಣುಃ ಜ್ಞೇಯಃ

ಬಹಿರಂಗವಾಗಿ ಜ್ಞಾನೋಪದೇಶವನ್ನು ಮಾಡಿದರೆ, ಅಯೋಗ್ಯರಿಗೂ ಜ್ಞಾನಪ್ರಾಪ್ತಿಯಾಗಿ

| | | |
|---|---|---|
| | | ಅನರ್ಥ ಉಂಟಾಗುವದರಿಂದ, ಉಪದೇಶವನ್ನು ಗೌಪ್ಯವಾಗಿಯೇ ಮಾಡಬೇಕು. |
| ॥ ೧೦ ॥ ಐಹಿಕಾಧಿಕರಣಮ್<br>೫೦ ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ | 10 ತೇನ ಯಾತ್ರಪರೋಕ್ಷತಾಂ | ಪ್ರತಿಬಂಧಕವಿರದಿದ್ದರೆ ಶ್ರವಣಾದಿಸಾಧನ ಪೂರ್ತಿಯಾದ ಜನ್ಮದಲ್ಲಿಯೇ ಅಪರೋಕ್ಷಜ್ಞಾನವುಂಟಾಗುವದು. |
| ॥ ೧೧ ॥ ಮುಕ್ತಿಫಲಾಧಿಕರಣಮ್<br>೫೧ ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ಓಂ | 11 ಜ್ಞಾನಾದೇವ ಸರ್ವೇಪಿ ಪುರುಷಾರ್ಥಾಸ್ಯುರ್ನ ಸಂಶಯಃ | ಪ್ರಾರಬ್ಧಕರ್ಮಾದಿ ಪ್ರತಿಬಂಧಕವಿರದಿದ್ದರೆ ಜ್ಞಾನದ ನಂತರದಲ್ಲಿಯೇ ಶರೀರಪಾತವಾದಮೇಲೆ ಮುಕ್ತಿಯಾಗುವದು, ಪ್ರಾರಬ್ಧವಿದ್ದರೆ ಜನ್ಮಾಂತರಗಳನ್ನು ಹೊಂದಬೇಕಾಗೇತ್ತದೆ. |

ಇತಿ ಬ್ರಹ್ಮಸೂತ್ರೇಷು ತೃತೀಯಾಧ್ಯಾಯಸ್ಯ ಚತುರ್ಥ ಪಾದಃ

| | | |
|---|---|---|
| ॥ ೧ ॥ ಆವೃತ್ತ್ಯಧಿಕರಣಮ್<br>೧ ಓಂ ಆವೃತ್ತಿರಸಕೃದುಪದೇಶಾತ್ ಓಂ<br>೨ ಓಂ ಲಿಂಗಾಚ್ಚ ಓಂ | 1 ನಿತ್ಯಮುಪಾಸನಂ ಕಾರ್ಯಂ | ಜ್ಞಾನಾರ್ಥವಾಗಿ ಶ್ರವಣಾದಿಗಳ ಆವೃತ್ತಿಯು (ಅನೇಕ ಸಲ ಶಾಸ್ತ್ರಶ್ರವಣಾದಿಗಳನ್ನು ಮಾಡುವದು) ಕಾರ್ಯವಾಗಿದೆ, ಉಪನಿಷತ್ತುಗಳಲ್ಲಿಯೂ ಸಹ ಗುರುವು ಶಿಷ್ಯರಿಗೆ ಅನೇಕ ಸಲ ಉಪದೇಶಿಸಿದ ತತ್ವವನ್ನೇ ಪುನಃ ಪುನಃ ಉಪದೇಶಿಸಿರುವುದು ಕಂಡುಬರುವುದು. ಉದಾ-"ಸ ಆತ್ಮಾ ತತ್ವಮಸಿ" ಎಂಬುದನ್ನು ಉದ್ದಾಲಕರು ಶ್ವೇತಕೇತುವನ್ನು ಕುರಿತು ಒಂಬತ್ತು ಸಲ ಉಪದೇಶಮಾಡಿರುವರು. |

| | | | |
|---|---|---|---|
| ॥ ೨ ॥ ಆತ್ಮಾಧಿಕರಣಮ್<br>೩ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ | ಓಂ | 2 ಆದಾತೇತ್ಯೇವಂ ನಿತ್ಯ ಮುಪಾಸನಂ ಕಾರ್ಯಮಾಪದ್ಯಪಿ | "ನಾನ್ಯಂ ವಿಚಿಂತಯೇ" ಇತ್ಯಾದಿ ಶ್ರುತಿಯಿರುವದರಿಂದ 'ಪರಮಾತ್ಮನು ನನ್ನ ಸ್ವಾಮಿಯಾಗಿದ್ದಾನೆ' ಎಂಬ ಉಪಾಸನೆಯು ನಿತ್ಯವೂ ಕಾರ್ಯವಾಗಿದೆ. |
| ॥ ೩ ॥ ಪ್ರತೀಕಾಧಿಕರಣಮ್<br>೪ ಓಂ ನ ಪ್ರತೀಕೇ ನ ಹಿ ಸಃ | ಓಂ | 3 ವಿಷ್ಣುರ್ನಾಮಾದೌ ಇತ್ಯೇವಂ ನಿತ್ಯ ಮುಪಾಸನಂ ಕಾರ್ಯಂ | ನಾಮಾದ್ಯಧಿಷ್ಠಾನ ವಿಷಯವಾದ ಪ್ರಾಕೃತ ಪ್ರತಿಮೆಯು ಪರಮಾತ್ಮನೆಂದು (ಪ್ರತಿಮೆಗೂ ಪರಮಾತ್ಮನಿಗೂ ಐಕ್ಯ ಚಿಂತನೆಯನ್ನು) ಉಪಾಸಿಸಬಾರದು ಹೀಗೆ ಉಪಾಸಿಸಿದರೆ ಅನರ್ಥ ಉಂಟಾಗುವದರಿಂದ ಪರಮಾತ್ಮನು ಪ್ರತಿಮೆಯಲ್ಲಿರುವನೆಂದು ಉಪಾಸನೆ ಮಾಡಬೇಕು. |
| ॥ ೪ ॥ ಬ್ರಹ್ಮದೃಷ್ಟ್ಯಧಿಕರಣಮ್<br>೫ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ | ಓಂ | 4 ವಿಷ್ಣು ಬ್ರಹ್ಮೇತ್ಯೇವಂ ನಿತ್ಯಂ ಉಪಾಸನಂ ಕಾರ್ಯಮಾಪದ್ಯಪಿ | ಸರ್ವ ಗುಣಪರಿಪೂರ್ಣತ್ವ ಉತ್ಕರ್ಷವು ಬ್ರಹ್ಮಶಬ್ದ ಪ್ರವೃತ್ತಿನಿಮಿತ್ತವಾಗಿರುವದರಿಂದ. ಪರಮಾತ್ಮನಲ್ಲಿ ಬ್ರಹ್ಮದೃಷ್ಟಿ (ಪೂರ್ಣತ್ವೋಪಾಸನೆ) ಯು ಸದಾ ಕಾರ್ಯವಾಗಿದೆ. |
| ॥ ೫ ॥ ಆದಿತ್ಯಾಧಿಕರಣಮ್<br>೬ ಓಂ ಆದಿತ್ಯಾದಿವತಯಶ್ಚಾಂಗ ಉಪಪತ್ತೇಃ | ಓಂ | 5 ಸುರೇಶ್ವರೈರ್ಯಥಾತ್ರಮಂ ಬಹುಗುಣೈಃ ವಿಷ್ಣುಃ ಉಪಾಸ್ಯಃ | ದೇವತೆಗಳು ಪರಮಾತ್ಮನ ಶರೀರಾಂಗಗಳಿಂದ ಉತ್ಪನ್ನರಾಗಿರುವದರಿಂದ ಮತ್ತು ಮುಕ್ತಿಯಲ್ಲಿ ಪರಮಾತ್ಮನ ಶರೀರಾಂಗ ಪ್ರವೇಶವು ಅವರಿಗೆ |

| | | | |
|---|---|---|---|
| | | (ತಥಾ) | ಅಪೇಕ್ಷಿತವಾಗಿರುವುದರಿಂದ ಅಂಗಾಶ್ರಿತತ್ವೇನ ದೇವತೆಗಳು ಪರಮಾತ್ಮನ ಉಪಾಸನೆಯನ್ನು ಅವಶ್ಯವಾಗಿ ಮೊಡಬೇಕು. |
| ॥ ೬ ॥ ಆಸೀನಾಧಿಕರಣಮ್ | | 6 ಉಪಾಸನಂ ನಿತ್ಯ ಮುಪಾಸನಂ ಕಾರ್ಯಂ | ಅಧಿಕಾರಿಯು ಆಸೀನ (ಆಸನದಲ್ಲಿ ಕುಳಿತು ಕೊಂಡವ) ನಾಗಿಯೇ ಪರಮಾತ್ಮನ ಉಪಾಸನೆಯನ್ನು ಮಾಡಬೇಕು ಏಕೆಂದರೆ ಆಸೀನನಾಗುವುದರಿಂದ ಚಿತ್ತೈಕಾಗ್ರತೆಯುಟಾಗಿ ಮನೋವಿಕ್ಷೇಪಾದಿಗಳು ಕಡಮೆಯಾಗುವವು' ಶರೀರವು ಚಲಿಸುತ್ತಿದ್ದರೆ ಮನಸ್ಸೂ ಚಲಿಸುವದು ಶರೀರವು ಅಚಲವಾಗಿದ್ದರೆ ಮುನಸ್ಸು ಅಚಲವಾಗಿರುವದು ಎಂಬ ಗೀತಾವಾಕ್ಯವೂ ಇದನ್ನೇ ತಿಳಿಸುವದು, |
| ೭ ಓಂ ಆಸೀನಸ್ಸಂಭವಾತ್ | ಓಂ | | |
| ೮ ಓಂ ಧ್ಯಾನಾಚ್ಚ | ಓಂ | | |
| ೯ ಓಂ ಅಚಲತ್ವಂ ಚಾಪೇಕ್ಷ್ಯ | ಓಂ | | |
| ೧೦ ಓಂ ಸ್ಮರಂತಿ ಚ | ಓಂ | | |
| ೧೧ ಓಂ ಯತ್ರೈಕಾಗ್ರತಾ ತತ್ರಾ-ವಿಶೇಷಾತ್ | ಓಂ | | |
| ॥ ೭ ॥ ಆಪ್ರಾಯಣಾಧಿಕರಣಮ್ | | 7 ನಿತ್ಯಂ | ಮುಕ್ತರೂ ಕೂಡ ಪರಮಾತ್ಮನ ಧ್ಯಾನವನ್ನು ಮಾಡುವದರಿಂದ ಹಾಗೂ ಸಯೋಹವೈ' ಇತ್ಯಾದಿಶ್ರುತಿಗಳಲ್ಲಿ ಧ್ಯಾನವು ಮೋಕ್ಷಪರ್ಯಂತರವಾಗಿ ಅವಶ್ಯವಾಗಿ ಕಾರ್ಯವೆಂದು ಹೇಳಿರುವದರಿಂದ ಮುಮುಕ್ಷುವು ಮೋಕ್ಷವಾಗುವವರೆಗೂ ಧ್ಯಾನವನ್ನು ಮಾಡುತ್ತಲೇ ಇರಬೇಕು. |
| ೧೨ ಓಂ ಆಪ್ರಾಯಣಾತ್ತತ್ರಾಪಿ ಹಿ ದೃಷ್ಟಂ | ಓಂ | | |

॥ ೮ ॥ ತದಧಿಗಾಮಾಧಿಕರಣಮ್

೧೩ ಓಂ ತದಧಿಗಮ ಉತ್ತರಪೂರ್ವಾ
ಘಯೋರಶ್ಲೇಷವಿನಾಶೌ
ತದ್ವ್ಯಪದೇಶಾತ್ ಓಂ

೧೪ ಓಂ ಇತರಸ್ಯಾಪ್ಯೇವಮಸಂಶ್ಲೇಷಃ
ಪಾತೇ ತು ಓಂ

೧೫ ಓಂ ಅನಾರಬ್ಧಕಾರ್ಯೇ ಏವ ತು
ಪೂರ್ವೇ ತದವಧೇಃ ಓಂ

೧೬ ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಾ
ಯೈವ ತದ್ದರ್ಶನಾತ್ ಓಂ

೧೭ ಓಂ ಅತೋಽನ್ಯದಪೀತ್ಯೇಕೇಷಾ
ಮುಭಯೋಃ ಓಂ

೧೮ ಓಂ ಯದೇವ ವಿದ್ಯಯೇತಿ ಹಿ ಓಂ

೧೯ ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಥ
ಸಂಪದ್ಯತೇ ಓಂ

॥ ೧ ॥ ವಾಗಧಿಕರಣಮ್

೧ ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ

8 ಪ್ರಾರಬ್ಧಕರ್ಮಣೋಽನ್ಯಸ್ಯ
ಜ್ಞಾನಾದೇವ ಪರಿಕ್ಷಯಃ।
ಅರಿಷ್ಟಸ್ಯೋಭಯಸ್ಯಾಪಿ
ಸರ್ವಸ್ಯಾನ್ಯಸ್ಯ ಭೋಗತಃ।

'ತದ್ಯಥಾ' ಇತ್ಯಾದಿಯಾದ ಛಾಂದೋಗ್ಯ ಶ್ರುತಿ ಇರುವದರಿಂದ. ಬ್ರಹ್ಮದರ್ಶನವಾದಮೇಲೆ ಅಪರೋಕ್ಷಜ್ಞಾನ ಪೂರ್ವಕಾಲೀನವಾದ ಕರ್ಮಕ್ಕೆ ನಾಶವೂ ಮತ್ತು ಅಪರೋಕ್ಷಜ್ಞಾನೋತ್ತರ ಕಾಲೀನವಾದ ಕರ್ಮಕ್ಕೆ ಅಶ್ಲೇಷವೂ ಉಂಟಾಗುವದು.

ಇತಿ ಬ್ರಹ್ಮ ಸೂತ್ರೇಷು ಚತುರ್ಥಾಧ್ಯಾಯಸ್ಯ ಪ್ರಥಮಃ ಪಾದಃ

1 ಉತ್ತರೇಷೂತ್ತರೇಷ್ವೇ
ವಂ ಯಾವದ್ವಾಯುಂ ವಾಗಭಿಮಾನಿಯಾದ ಉಮಾ, ವಾರುಣೀ,

| | | | |
|---|---|---|---|
| ೨ ಓಂ ಅತ ಏವ ಚ ಸರ್ವಾಣ್ಯನು | ಓಂ | ವಿಮುಕ್ತಿಗಾ। ಪ್ರವಿಶ್ಯಭುಂಜತೇ ಭೋಗಾನ್ ತದಂತರ್ಬಹಿ ರೇವ ವಾ | ಸೌಗರ್ಣೀಯರಿಗೆ ಮನೋಭಿಮಾನಿಯಾದ ರುದ್ರ, ಶೇಷ, ಗರುಡ, ದೇವರುಗಳಲ್ಲಿ ಲಯವು ಇರುತ್ತದೆ. ಯಾಕೆಂದರೆ ಕಾರ್ಯಕ್ಕೆ ಕಾರಣದಲ್ಲಿ ಲಯವು ಬರುವುದು. ಮನಸ್ಸಿನಿಂದ ಸಂಕಲ್ಪಿಸಿ ನಂತರ ಶಬ್ದದಿಂದ ವ್ಯವಹಾರ ಮಾಡುತ್ತಾರೆ (ಅಂದರೆ ಮಾತನಾಡುತ್ತಾರೆ) 'ಮನಸಾವಾ ಅಗ್ರ ಸಂಕಲ್ಪಯತಿ ವಾಚಾವ್ಯವಹರತಿ' ಎಂಬ ಶ್ರುತಿಯೂ ವಾಕ್‌ಗೆ ಮನೋದೀನತ್ವವನ್ನು ಪ್ರತಿಪಾದಿಸುತ್ತದೆ. ಕಾರ್ಯಕ್ಕೆ ಕಾರಣದಲ್ಲಿ ಲಯವಿರುವುದರಿಂದ ಸರ್ವದೇವತೆಪಳೂ ತಮಗೆ ಯೋಗ್ಯರಾದ ದೇವತೆಗಳಲ್ಲಿ ಲಯವನ್ನು ಹೊಂದುತ್ತಾರೆ, |
| ॥ ೨ ॥ ಮನಃಪ್ರಾಣಾಧಿಕರಣಮ್ | | | |
| ೩ ಓಂ ತನ್ಮನಃ ಪ್ರಾಣ ಉತ್ತರಾತ್ | ಓಂ | 2 — " — | ಪೂರ್ವೋಕ್ತಮನೋಭಿ ಮಾನಿಯಾದ ಶೇಷನು ಹಾಗೂ ಗರುಡನು ಚತುರ್ಮುಖನಲ್ಲಿ ಲಯವನ್ನು ಹೊಂದುತ್ತಾರೆ. 'ಮನಃಪ್ರಾಣೆ' ಎಂಬ ಉತ್ತರ ವಾಕ್ಯವು ಇದನ್ನೇ ತಿಳಿಸುತ್ತದೆ, |
| ॥ ೩ ॥ ಅಧ್ಯಕ್ಷಾಧಿಕರಣಮ್ | | | |
| ೪ ಓಂ ಸೋಽಧ್ಯಕ್ಷೇ ತದುಪ | | 3 ವಾಯುರ್ವಿಷ್ಣುಂ ಪ್ರವಿಶ್ಯೈವ ತದಂತ। | ಚತುರ್ಮುಖನು ತನಗೆ ನಿಯಾಮಕನಾದ ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾನೆ ಪರ |

| | | | |
|---|---|---|---|
| ಗಮಾದಿಭ್ಯಃ | ಓಂ | ಬಹಿರೇವವಾ ಭೋಗಾನ್ ಭುಂಜತೇ ಭೋಗತ್ವೈ ವೋತ್ತರೋತ್ತರಮ್ | ಮಾತ್ಮನ ಪ್ರಾಪ್ತ್ಯಾದಿಗಳನ್ನು ತಿಳಿಸುವ ಶ್ರುತಿಯು ಇದೇ ಅರ್ಥವನ್ನು ತಿಳಿಸುವದು. |
| ‖ ೪ ‖ ಭೂತಾಧಿಕರಣಮ್<br>೫ ಓಂ ಭೂತೇಷು ತಚ್ಛ್ರುತೇಃ | ಓಂ | 4 ಉತ್ತರೇ— — — "<br>ಬಹಿರೇವವಾ | ಪೂರ್ವೋಕ್ತರಾದ ಉಮಾದಿದೇವತೆಗಳಿಂದ ಭಿನ್ನ ರಾದ ದೇವತೆಗಳು ಭೂತಗಳಲ್ಲಿ ಲಯವನ್ನು ಹೊಂದುತ್ತಾರೆ |
| ‖ ೫ ‖ ನೈಕಸ್ಮಿನ್ನಧಿಕರಣಮ್<br>೬ ಓಂ ನೈಕಸ್ಮಿನ್ ದರ್ಶಯತೋ ಹಿ | ಓಂ | 5 — " — | ಸರ್ವ ದೇವತೆಗಳೂ ಅಗ್ನಿಯಲ್ಲಿಯೇ ಲಯವನ್ನು ಹೊಂದುವದಿಲ್ಲಾ ಯಥಾಯೋಗ್ಯವಾಗಿ ಭೂತ ಗಳಲ್ಲಿ ಲಯವನ್ನು ಹೊಂದುತ್ತಾರೆಂದು 'ಪೃಥಿ ವ್ಯಾಮೃಭವಃ' ಎಂಬ ಶ್ರುತಿಯು ಪ್ರತಿಪಾದಿಸು ತ್ತದೆ. |
| ‖ ೬ ‖ ಸ್ವಮಾಸಾಧಿಕರಣಮ್<br>೭ ಓಂ ಸಮನಾ ಚಾಸೃತ್ಯುಪಕ್ರಮಾದ ಮೃತತ್ವಂ ಚಾನುಪೋಷ್ಯ | ಓಂ | 6 — —" — | ಲಕ್ಷ್ಮೀದೇವಿಯು ಪರಮಾತ್ಮನನ್ನು ಉಪಾಸಿಸದೇ ನಿತ್ಯಮುಕ್ತಳಾಗಿದ್ದರಿಂದಾ ಪರಮಾತ್ಮನಲ್ಲಿ ಲಯ ವನ್ನು ಹೊಂದುವದಿಲ್ಲಾ ದೇಶದಿಂದಲೂ ಪರ ಮಾತ್ಮನಿಗೆ ಸಮಾನಳಾಗಿದ್ದರಿಂದ ಸಂಸಾರದ ಪಾರಂಭವೂ ಇರುವದಿಲ್ಲಾ. |
| ೮ ಓಂ ತೇದಪೀತೇಃ ಸಂಸಾರ ವ್ಯಪದೇಶಾತ್ | ಓಂ | | |

೯ ಓಂ ಸೂಕ್ಷ್ಮಂ ಪ್ರಮಾಣತಶ್ಚ
ತಥೋಪಲಬ್ಧೇಃ ಓಂ

೧೦ ಓಂ ನೋಪಮರ್ದೇನಾತಃ ಓಂ

೧೧ ಓಂ ಅಸ್ಯೈವಚೋಪಪತ್ತೇರೂಷ್ಮಾ ಓಂ

೧೨ ಓಂ ಪ್ರತಿಷೇಧಾದಿತಿ ಚೇನ್ನ
ಶಾರೀರಾತ್ ಓಂ

೧೩ ಓಂ ಸ್ಪಷ್ಟೋ ಹ್ಯೇಕೇಷಾಂ ಓಂ

೧೪ ಓಂ ಸ್ಮರ್ಯತೇ ಚ ಓಂ

॥ ೭ ॥ ತಾನಿಪರಾಧಿಕರಣಮ್

೧೫ ಓಂ ತಾನಿ ಪರೇ ತಥಾ ಹ್ಯಾಹ ಓಂ

7 — ” —



“ಭೂತೇಷುಲೀಯಂತೆ” ಇತ್ಯುಕ್ತರಾದ ದೇವತೆಗಳು ಸ್ವಸ್ವನಿಯಾಮಕದ್ವಾರಾ ಸ್ವಬಿಂಬರಾದ ಚತುರ್ಮುಖನನ್ನು, ಅಲ್ಲಿಲಯವನ್ನುಹೊಂದದೆ ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾರೆ ಚತುರ್ಮುಖ ದೇವರಲ್ಲಿ ಲಯವನ್ನು ಹೊಂದಿನರೆ ಮುಕ್ತಿಯು ಸಿಗುವುದಿಲ್ಲಾ ‘ಸರ್ವೆದೇವಾಃ’ ಎಂಬ ಶ್ರುತಿಯು ಸರ್ವರಿಗೂ ಪರಮಾತ್ಮನಲ್ಲಿಯೇ ಲಯವನ್ನು ಪ್ರತಿಪಾದಿಸುತ್ತದೆ.

॥ ೮ ॥ ಅವಿಭಾಗಾಧಿಕರಣಮ್

೧೭ ಓಂ ಅವಿಭಾಗೋ ವಚನಾತ್ ಓಂ

8 — " —

ಮುಕ್ತರು ಪರಮಾತ್ಮನಿಗೆ (ಇಷ್ಟ) ಅಪೇಕ್ಷಿತವಾದದ್ದನ್ನೇ ಇಚ್ಛಿಸುವರಿಂದ, ಭಗವಂತನ ಅಧೀನರಾಗಿದ್ದಾರೆ ಸತ್ಯಕಾಮರೂ ಆಗಿದ್ದಾರೆ.

॥ ೯ ॥ ತದೋಕೋಧಿಕರಣಮ್

೧೮ ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕ(ತ)ಯಾ ಓಂ

೧೮ ಓಂ ರಶ್ಮ್ಯನುಸಾರೀ ಓಂ

೧೯ ಓಂ ನಿಶಿ ನೇತಿ ಚೇನ್ನ ಸಂಬಂಧಾತ್ ಓಂ

೨೦ ಓಂ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ಓಂ

೨೧ ಓಂ ಅತಶ್ಚಾಯನೇಽಪಿ ಹಿ ದಕ್ಷಿಣೇ ಓಂ

9 ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ

ಅಪರೋಕ್ಷಜ್ಞಾನಿಗೆ ಮರಣಕಾಲದಲ್ಲಿ ಹೃದಯದ ಅಗ್ರಭಾಗದಲ್ಲಿ ಪ್ರಕಾಶವು ಹುಟ್ಟುವದು, ಪ್ರಕಾಶಿತವಾದ ಸುಷುಮ್ನಾ ನಾಡಿಯಿಂದ ಪ್ರಯಾಣಮಾಡುವ ಕಾಲದಲ್ಲಿ ಪರಮಾತ್ಮನಿಂದ ಅನನ್ಯಗೃಹೀತನಾಗಿ, ಹೃದಯವನ್ನಾರಂಭಿಸಿ ಬ್ರಹ್ಮಪರ್ಯಂತವಾದ ಮಾರ್ಗಸ್ಮೃತಿಯನ್ನು ಹೊಂದಿಕೊಂಡು ಅಪರೋಕ್ಷಜ್ಞಾನದ ಸಾಮರ್ಥ್ಯದಿಂದ ಪ್ರಯಾಣ ಮಾಡುತ್ತಾನೆ.

॥ ೧೦ ॥ ಯೋಗ್ಯಧಿಕರಣಮ್

೨೨ ಓಂ ಯೋಗಿನಃ ಪ್ರತಿಸ್ಮರ್ಯತೇ ಸ್ಮಾರ್ತೇಚೈತೇ ಓಂ

10 ಉತ್ಕ್ರಮ್ಯ ಮುಕ್ತಿಂ ಯಾಂತಿ

ಶ್ರುತಿಗಳು ಜ್ಞಾನಯೋಗಿಗಳಿಗೆ ಕರ್ಮಯೋಗಿಗಳಿಗೆ ಬ್ರಹ್ಮ ಚಂದ್ರ ಪ್ರಾಪ್ತಿಯನ್ನು ಪ್ರತಿಪಾದಿಸುತ್ತವೆ. ಕೇವಲ ಕಾಲಮರಣದಿಂದ ಬ್ರಹ್ಮಾದಿಲೋಕ

ಪ್ರಾಪ್ತಿಯಾಗುವದಿಲ್ಲಾ ಅದರಲ್ಲಿಯೂ ಕರ್ಮ ಯೋಗಿಗಳಿಗೆ ಜ್ಞಾನಿಗಳಿಗೆ. ಗತಿಸ್ಮರಣ ಸಮೇತ ವಾದ ಜ್ಞಾನದಿಂದ ದೊರಕುವ ಬ್ರಹ್ಮಗತಿಯು ಸರ್ವಥಾ ಸಿಗುವದಿಲ್ಲಾ.

ಇತಿ ಚತುರ್ಥಾಧ್ಯಾಯಸ್ಯದ್ವಿತೀಯಃ ಪಾದಃ

॥ ೧ ॥ ಅರ್ಚಿರಧಿಕರಣಮ್

೧ ಓಂ ಅರ್ಚಿರಾದಿನಾತತ್ಪ್ರಥಿತೇಃ ಓಂ

1 ಅರ್ಚಿರಾದಿ ಪಥಾ ವಾಯುಂ ಪ್ರಾಪ್ಯ

'ತೇಽರ್ಚಿಷಮಭಿಸಂಭವಂತಿ' ಎಂದು ಶ್ರುತಿಯಿರುವುದರಿಂದ ಪರಬ್ರಹ್ಮನನ್ನು ಹೊಂದತಕ್ಕ ಶರೀರದಿಂದ ಉತ್ಕ್ರಾಂತನಾದ ಜ್ಞಾನಿಯು ಅರ್ಚಿರಾದಿ ಮಾರ್ಗದಿಂದ ಪ್ರಯಾಣ ಮಾಡುತ್ತಾನೆ.

॥ ೨ ॥ ವಾಯುಶಬ್ದಾದವಿಶೇಷ ವಿಶೇಷಾಭ್ಯಾಂ ಓಂ

2 — " —

"ಸವಾಯುಮಾಗಚ್ಛತಿ" ಎಂಬ ಸಾಮಾನ್ಯ ವಚನವೂ 'ಸ ಇತೋ ಗತೋ ದ್ವಿತೀಯಾಂಗತಿಂ ವಾಯುಮಾ ಗಚ್ಛತಿ" ಎಂಬ ವಿಶೇಷ ವಚನವೂ ಇರುವುದರಿಂದ ಜ್ಞಾನಿಯೂ ಅರ್ಚಿಲೋಕಾನಂತರದಲ್ಲಿ ವಾಯು ಲೋಕವನ್ನು ಹೊಂದುತ್ತಾನೆ.

॥ ೩ ॥ ತಟಿದಧಿಕರಣಮ್

೩ ಓಂ ತಟಿತೋಽಧಿವರುಣಃ ಸಂಬಂಧಾತ್ ಓಂ

3 — —

ಜ್ಞಾನಿಯು ಸಂವತ್ಸರಲೋಕ ಪ್ರಾಪ್ತ್ಯನಂತರದಲ್ಲಿ ತಟಿಲ್ಲೋಕವನ್ನು ಹೊಂದುವನು. 'ತಟಿತಾಹ್ಯೊ ಪ್ರತಿ ವರುಣಲೋಕ'. ಎಂಬಲ್ಲಿ ಸಂಬಂಧವು ಪ್ರಮಾಣವಾಗುವುದರಿಂದ ಜ್ಞಾನಿಯು ತಟಿಲ್ಲೋಕದಿಂದ ವರುಣಲೋಕಕ್ಕೆ ಹೋಗುತ್ತಾನೆ

॥ ೪ ॥ ಆತಿವಾಹಿಕಾಧಿಕರಣಮ್

೪ ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ

೫ ಓಂ ಉಭಯವ್ಯಾಮೋಹಾತ್ತತ್ಸಿದ್ಧೇಃ ಓಂ

4 — " —

ಪೂರ್ವಗಮನರೂಪಲಿಂಗವು ಶ್ರುತವಾಗುವುದರಿಂದ ಅರ್ಚಿರ್ಲೋಕಾನಂತರದಲ್ಲಿ ಪ್ರಾಪ್ತವಾದ ವಾಯುಲೋಕವು ಆತಿವಾಹಿಕ ವಾಯುಲೋಕವೆಂದು ಸಿದ್ಧವಾಗುವುದು. ಅದು ಮುಖ್ಯ ವಾಯುಲೋಕವಲ್ಲ

॥ ೫ ॥ ವೈದ್ಯುತಾಧಿಕರಣಮ್

೬ ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ

5 ತೇನ ಜನಾರ್ದನಂ ಯಾಂತಿ

ಸ ಏನಾನ್ ಬ್ರಹ್ಮಗಮಯತಿ ಎಂಬ ಶ್ರುತಿಯು ಮುಖ್ಯವಾಯುವಿಗೆ ಬ್ರಹ್ಮಪ್ರಾಪಕತ್ವ (ಬ್ರಹ್ಮನನ್ನು ಹೊಂದಿಸುವುದು) ವನ್ನು ಪ್ರತಿಪಾದಿಸುವುದರಿಂದ ಈಶಪ್ರಾಪ್ತಿಮಾರ್ಗದಲ್ಲಿ ಅಂತ್ಯದಲ್ಲಿ ವಾಯುವೇ ಮಾರ್ಗರೂಪನು ಪ್ರಧಾನನಾಯಕನಾಗಿದ್ದಾನೆ

|| ೬ || ಕಾರ್ಯಾಧಿಕರಣಮ್

೭ ಓಂ ಕಾರ್ಯಂ ಬಾದರಿರಸ್ಯ
ಗತ್ಯು ಪಪತ್ತೇಃ ಓಂ

೮ ಓಂ ವಿಶೇಷಿತತ್ವಾಚ್ಚ ಓಂ

೯ ಓಂ ಸಾಮಿಪ್ಯಾತ್ತು ತದ್ವ್ಯಪದೇಶಃ ಓಂ

೧೦ ಓಂ ಕಾರ್ಯಾತ್ಯಯೇ ತದಧ್ಯಕ್ಷೇಣ
ಸಹಾತಃ ಪರಮಭಿಧಾನಾತ್ ಓಂ

೧೧ ಓಂ ಸ್ಮೃತೇಶ್ಚ ಓಂ

೧೨ ಓಂ ಪರಂ ಜೈಮಿನಿಮುಖ್ಯತ್ವಾತ್ ಓಂ

೧೩ ಓಂ ದರ್ಶನಾಚ್ಚ ಓಂ

೧೪ ಓಂ ನ ಚ ಕಾರ್ಯೇ ಪ್ರತಿಪತ್ತ್ಯ
ಭಿಸಂಧಿಃ ಓಂ

೧೫ ಓಂ ಅಪ್ರತೀಕಾಲಂಬನಾನ್ನಯತೀತಿ
ಬಾದರಾಯಣ ಉಭಯಥಾ ಚ
ದೋಷಾತ್ತತ್ಕ್ರತುಶ್ಚ ಓಂ

೧೬ ಓಂ ವಿಶೇಷಂ ಚ ದರ್ಶಯತಿ ಓಂ

6 ಉತ್ತಮಾಃ
ಜನಾರ್ದನಂ ಯಾಂತಿ

ಬೇರೆ ಬೇರೆ ಅಧಿಕಾರಿಗಳಿಗೆ ಬೇರೆ ಬೇರೆಗತಿಯು ವಾಯುದೇವರು ಅಪ್ರತೀಕಾಲಂಬನರಾದ ದೇವತೆಗಳನ್ನು ಪರಬ್ರಹ್ಮನನ್ನು ಕುರಿತು ಹೊಂದಿಸುತ್ತಾರೆ. ಪ್ರತೀಕಾಲಂಬನರಾದ ಮನುಷ್ಯರಿಗೆ ಚತುರ್ಮುಖನನ್ನು ಹೊಂದಸುತ್ತಾರೆ.

ಇತಿ ಚತುರ್ಥಾಧ್ಯಾಯಸ್ಯ ತೃತೀಯಃಪಾದಃ

॥ ೧ ॥ ಸಂಪನ್ನಾಧಿಕರಣಮ್
೧ ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ

1 ಸಹಾಮುನಾಯಧಾ ಸಂಕಲ್ಪ ಭೋಗಾಶ್ಚ ಚಿದಾನಂದ ಶರೀರಿಣಃ

॥ ೨ ॥ ಮುಕ್ತಾಧಿಕರಣಮ್
೨ ಓಂ ಮುಕ್ತಃ ಪ್ರತಿಜ್ಞಾನಾತ್ ಓಂ

2 — " —

॥ ೩ ॥ ಆತ್ಮಾಧಿಕರಣಮ್
೩ ಓಂ ಆತ್ಮಾ ಪ್ರಕರಣಾತ್ ಓಂ

3 ಅಮುನಾ

ಪರಂಜ್ಯೋತಿ. ಎಂಬಶ್ರುತಿಯಿಂದ ಮುಕ್ತನು ಪರಬ್ರಹ್ಮನನ್ನುಹೊಂದಿ, ಅವನನ್ನು ಅತಿಕ್ರಮಿಸದೇ ತನ್ನ ಸ್ವರೂಪ ದೇಹದಿಂದಲೇ ಭೋಗಗಳನ್ನು ಅನುಭವಿಸುತ್ತಾನೆ
"ಅಥ ಯಧ್ಯೈನಂ ಮುಕ್ತೋ ಅನು ಪ್ರ ವಿ ಶ ತಿ ಮೋದತೆ ಪ್ರಮೋದತೆ" ಎಂಬ ಶ್ರುತಿಯಲ್ಲಿ ಮುಕ್ತರಿಗೇ ಇಂತಹ ಭೋಗವು ಪ್ರತಿಜ್ಞಾತವಾಗಿರುವದರಿಂದ ಮತ್ತು ಮುಕ್ತಭಿನ್ನರಿಗೆ ಅಹರಹಃ ಎಂಬ ಶ್ರುತಿಯಲ್ಲಿ ದಿವ್ಯ ಭೋಗಗಳು ನಿಷೇಧಿಸಲ್ಪಟ್ಟಿರುವದರಿಂದ, ಬ್ರಹ್ಮನನ್ನು ಹೊಂದಿದ ಮುಕ್ತರೇ ದಿವ್ಯ ಭೋಗಗಳನ್ನು ಪಡೆಯುವರೆಂದು ಸಿದ್ಧವಾಗುವುದು.

· ಪರಂ ಜ್ಯೋತಿರುಪಸಂಪದ್ಯ ಎಂಬುದು ಪರಮಾತ್ಮನ ಪ್ರಕರಣದಲ್ಲಿ ಪಠಿತವಾಗುವುದರಿಂದ, ಪರಂಜ್ಯೋತಿಃ ಶಬ್ದವು ಪರಮಾತ್ಮವಾಚಕವಾಗುವುದು. ಆದ್ದರಿಂದ ಮುಕ್ತರಿಂದ ಪ್ರಾಪ್ತವಾದ ಪರಂಜ್ಯೋತಿಯು ಪರಬ್ರಹ್ಮನೆಂದೇ ಸಿದ್ಧವಾಗುವುದು

|| ೪ || ಅವಿಭಾಗಾಧಿಕರಣಮ್

| | | | | |
|---|---|---|---|---|
| ೪ | ಓಂ ಅವಿಭಾಗೇನ ದೃಷ್ಟತ್ವಾತ್ ಓಂ | 4 | ಅಮುನಾಸಹೋತ್ರಮಾ ಯಥಾಸಂಕಲ್ಪ ಭೋಗಾಶ್ಚ | 'ಯಾನೇವಾಹಂ—' ಇತ್ಯಾದಿ ಶ್ರುತಿ ಪ್ರಮಾಣ ಬಲದಿಂದ. ನಾಯುಜ್ಯಭಾಗಗಳಾದ ಮುಕ್ತರು, ಪರಮಾತ್ಮನಿಂದ ಅನುಭವಿಸಲ್ಪಟ್ಟ ಭೋಗಗಳ ಕೆಲವು ಅಂಶಗಳನ್ನು ಅನುಭವಿಸುತ್ತಾರೆಂದು ತಿಳಿಯುವದು. |

|| ೫ || ಬ್ರಾಹ್ಮೇಣಾಧಿಕರಣಮ್

| | | | | |
|---|---|---|---|---|
| ೫ | ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ | 5 | ಅಮುನಾಯಥಾ ಸಂಕಲ್ಪ ಭೋಗಾಶ್ಚ ಚಿದಾನುದ ಶರೀರಿಣಃ। | ಮುಕ್ತರು ಪರಮಾತ್ಮನ ದೇಹದಿಂದಾಗಲೀ ಅಥವಾ ಚಿನ್ಮಾತ್ರ ದೇಹದಿಂದಾಗಲೀ ಭೋಗಗಳನ್ನು ಭೋಗಿಸುತ್ತಾರೆ ಯಾದ್ದರಿಂದ ದೇಹವಿಲ್ಲದ ಮುಕ್ತರಿಗೆ ಭೋಕ್ತೃತ್ವವು ಕದಡುವುದಿಲ್ಲ ವೆಂದು ಶಂಕಿಸಬಾರದು. |
| ೬ | ಓಂ ಚಿತಿಮಾತ್ರೇಣತದಾತ್ಮಕತ್ವಾದಿತ್ಯೌಡುಲೋಮಿಃ ಓಂ | | | |
| ೭ | ಏವಮಪ್ಯುಪನ್ಯಾಸಾತ್ಪೂರ್ವಭಾವಾದವಿರೋಧಂ ಬಾದರಾಯಣಃ ಓಂ | | | |

|| ೬ || ಸಂಕಲ್ಪಾಧಿಕರಣಮ್

| | | | | |
|---|---|---|---|---|
| ೮ | ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ | 6 | ಯಥಾಸಂಕಲ್ಪಭೋಗಾ। | 'ಸಂಕಲ್ಪಾದೇವಾಸ್ಯ ಪಿತರಃ– ಇತ್ಯಾದಿ ಶ್ರುತಿಗಳಿಂದ 'ಮುಕ್ತರು ಸಾಧನಾಧಿ ಪ್ರಯತ್ನದಿಂದ ಭೋಗಗಳನ್ನು ಹೊಂದುವುದಿಲ್ಲ. ಕೇವಲ ಇಚ್ಛಾ |

" ೭ " ಆನನ್ಯಾದಿವತ್ಯಧಿಕರಣಮ್

೯ ಎಂ ಅತ ಏವ ಚಾನನ್ಯಾಧಿಧಿಪತಿಃ ಎಂ

" ೮ " ಅಭಾವಾಕಧಿರಣಮ್

೧೦ ಎಂ ಅಭಾವಂ ಬಾದರಿರಾಹ ಹ್ಯೇವಂ ಎಂ

೧೧ ಎಂ ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್

೧೨ ಎಂ ದ್ವಾದಶಾಹವದುಭಯವಿಧಂ ಬಾದರಾಯಣಣೋತಃ ಎಂ

೧೩ ಎಂ ತನ್ವಭಾವೇ ಸಂಧ್ಯವದ ಪಪತ್ತೇಃ ಎಂ

೧೪ ಎಂ ಭಾವೇ ಜಾಗ್ರದ್ವತ್ ಎಂ

೧೫ ಎಂ ಪ್ರದೀಪವದಾವೇಶಸ್ತಥಾಹಿ ದರ್ಶಯತಿ ಎಂ

೧೬ ಸ್ವಾಪ್ಯಯಸಂಪತ್ತ್ಯೋರನ್ಯತರಾ-ಪೇಕ್ಷಮಾವಿಷ್ಕೃತಂ ಹಿ ಎಂ

7 ವಿನಾಸ್ವಾಭಾವಿ ಕೋತ್ತಮಾಸನ್ಯವಶಗಾಃ

8 ದುಃಖಾದಿ ರಹಿತಾಃ

ಮಾತ್ರದಿಂದಲೇ ಆಪೇಕ್ಷಿತವನ್ನು ಪಡೆಯುವರು. ಎಂಬುದು ಸಿದ್ಧವಾಗುವದು.

ಮುಕ್ತರು ಸತ್ಯಸಂಕಲ್ಪರಾದುದರಿಂದ ಪರಮಾತ್ಮ ಹಾಗೂ ಸ್ವೋತ್ತಮರಿಂದ ಮಾತ್ರ ನಿಯಮ್ಯ ರಾಗಿದ್ದಾರೆ ಸ್ವಾವರರಿಂದ ಅವರು ನಿಯಮ್ಯರಲ್ಲ.

ಮುಕ್ತರು ಪ್ರಾಕೃತದೇಹರ ಹಿತರಾದರೂ ಚಿನ್ಮಾತ್ರದೇಹದಿಂದ ಭೋಗಿಸುವರೆಂದು ಬಾದರಿಆಚಾರ್ಯರು ಹೇಳುವರು. ಚಿನ್ಮಾತ್ರ ದೇಹದಿಂದ ಭಿನ್ನ ವಾದ ಪ್ರಾಕೃತ ದೇಹದಿಂದಲೂ ಭೋಗವು ಬರುವದೆಂದು ಜೈಮಿನ್ಯಾ ಚಾರ್ಯರು ಹೇಳುವರು. ಇವೆರಡೂ ವಿರುದ್ಧವಲ್ಲ 'ದ್ವಾದಶಾಹ ಯಾಗವು ಏಕಕರ್ತೃಕ ಅನೇಕ ಕರ್ತೃಕ ಭೇದಿಂದ ಕ್ರತುವೂ ಸತ್ರವೂ ಆಗುವಂತೆ" ಪ್ರಮಾಣಗಳಿರುವದರಿಂದ ಮುಕ್ತರಿಗೆ ಭೋಗವು ಬಾಹ್ಯಶರೀರದಿಂದಾಗಲೀ ಅಥವಾ ಚಿನ್ಮಾತ್ರ ಶರೀರದಿಂದಾಗಲೀ ಆಗಬಹು ದು ಎಂದು ಬಾದರಾಯಣಾಚಾರ್ಯರು ಹೇಳುವರು.

॥ ೯ ॥ ಜಗದ್ವ್ಯಾಪಾರಾಧಿಕರಣಮ್

೧೭ ಓಂ ಜಗದ್ವ್ಯಾಪಾರವರ್ಜಂ ಓಂ

೧೮ ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ

೧೯ ಓಂ ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿ
ಕಾರಿಕಮಂಲಸ್ಥೋಕ್ತೇಃ ಓಂ

೨೦ ಓಂ ವಿಕಾರವರ್ತಿ ಚ ತಥಾ ಹಿ
ದರ್ಶಯತಿ ಓಂ

॥ ೧೦ ॥ಸ್ಥಿತ್ಯಧಿಕರಣಮ್

೨೧ ಓಂ ಸ್ಥಿತಿವಯಹ ದರ್ಶಯತ ಶ್ಚೈವಂ
ಪ್ರತ್ಯಕ್ಷಾನುಮಾನೇ ಓಂ

೨೨ ಓಂ ಭೋಗಮಾತ್ರಸಾಮ್ಯಲಿಂಗಾಚ್ಚ ಓಂ

॥ ೧೧ ॥ ಅನಾವೃತ್ತ್ಯಧಿಕರಣಮ್

೨೩ ಓಂ ಅನಾವೃತ್ತಿಶ್ಶಬ್ದಾದನಾವೃತ್ತಿ
ಶಬ್ದಾತ್ ಓಂ

9 ಜಗತ್ ಸೃಷ್ಟ್ಯಾದಿ ವಿಷಯೇ ಮಹಾ ಸಾಮರ್ಥ್ಯಮಪಿಯುತೇ ಯಥೇಷ್ಟ ಶಕ್ತಿಮಂತಃ

ಸೃಷ್ಟ್ಯಾದಿ ಜಗದ್ವ್ಯಾಪಾರವನ್ನು ಬಿಟ್ಟು ಮುಕ್ತರು ಇತರ ಸಮಸ್ತ ಕಾಮಗಳನ್ನೂ ಅನುಭವಿಸುತ್ತಾರೆ.

10 ವೃದ್ಧಿಹ್ರಾಸವಿವರ್ಜಿತಾಃ

ಮುಕ್ತರಭೋಗವು ಏಕಪ್ರಕಾರಕವಾಗಿರುವದರಿಂದ ಮುಕ್ತರಿಗೆ ಭೋಗಾದಿಗಳಿಂದ ವೃದ್ಧಿಹ್ರಾಸಗಳಾಗುವದಿಲ್ಲ.

11 ಅವಿರತಂ ಸುಖಂ ನಿತ್ಯಂ ಮೋದಂತೇ

' ನಚ ಪುನರಾವರ್ತತೆ' ಎಂದು ಶ್ರುತಿಯಿರುವದರಿಂದ ಮುಕ್ತರು ಪುನರಾವೃತ್ತಿಯನ್ನು ಹೊಂದದೆ 'ಸರ್ವಾನ್ ಕಾಮಾನಾಪ್ತ್ವಾಸಮಭವತ್' ನಿತ್ಯನಿರಂತರವಾದ ಸುಖವನ್ನನುಭವಿಸುತ್ತ ಶಾಸ್ವತ ಸುಖಿಗಳಾಗಿ ಪರಮಾತ್ಮನ ಸಾನ್ನಿಧ್ಯದಲ್ಲಿರುವರು.

॥ ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತ ಬ್ರಹ್ಮಸೂತ್ರೇಷು ಚತುರ್ಥಾಧ್ಯಾಯಸ್ಯ

ಚತುರ್ಥಃ ಪಾದಃ ॥ ೪ ॥ ॥ ೪ ॥

ಇತಿ ಶ್ರೀ ಗುರ್ವಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ

ಶ್ರೀ ಬಾದರಾಯಣಃ ಪ್ರಿಯತಾಂ ॥ ಪ್ರೀತೋಭವತು ॥ ಶ್ರೀಕೃಷ್ಣಾರ್ಪಣಮಸ್ತು ॥

ಇಲ್ಲಿಗೆ ಶ್ರೀ ಬ್ರಹ್ಮಸೂತ್ರಾಣುಭಾಷ್ಯಾರ್ಥ ಸಂಗ್ರಹವು ಸಮಾಪ್ತವಾಯಿತು.

# ಶ್ರೀ ರಾಘವೇಂದ್ರಾಶ್ರಮ ಪರಿಚಯ

|| ಶ್ರೀ ಗುರುರಾಘವೇಂದ್ರಾಯ ನಮಃ ||

ಪೂಜ್ಯಾಯ ರಾಘವೇಂದ್ರಾಯ ಸತ್ಯ ಧರ್ಮರತಾಯಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ||

ರಾಘವೇಂದ್ರ ಆಶ್ರಮ. ರಾಘವೇಂದ್ರ ನಗರ.

ಸ್ಥಾಪನೆ:-

ನಮ್ಮ ಆಶ್ರಮವು ಶ್ರೀ ಗುರುರಾಜರ ಪ್ರೇರಣೆಯಿಂದಲೇ ಸ್ಥಾಪಿತವಾದುದೆಂಬುವರಲ್ಲಿ ಯಾವ ಸಂದೇಹವೂ ಇಲ್ಲ. ನಮ್ಮ ಆಶ್ರಮ ಅಧ್ಯಕ್ಷರೂ ಮತ್ತು ಆದ ಮಹಾಪೋಷಕರೂ ಶ್ರೀ ಜಿ. ಎಸ್. ವಾಸುದೇವರಾಯರಿಗೆ ಬೆಂಗಳೂರು ಬಳಿ ಗ್ರಾಮದಲ್ಲಿ ದೊಡ್ಡಬೊಮ್ಮಸಂದ್ರ ಸುಮಾರು 6000 ಚ. ಮೀ. ಭೂಮಿಯು ಪಿತ್ರಾರ್ಜಿತವಾಗಿ ದೊರೆಯಿತು ಸುತ್ತು ಮುತ್ತಲಿನವರೆಲ್ಲರೂ ಬೆಂಗಳೂರಿಗೆ ಹತ್ತಿರವಾದ ಸ್ಥಳವಾದುದರಿಂದ ತಮ್ಮ ತಮ್ಮ ಜಮೀನುಗಳೆಲ್ಲವನ್ನು ಖಾಸಗಿ ನಿವೇಶನಗಳನ್ನಾಗಿ ವಿಂಗಡಿಸಿ ಲಕ್ಷಾಂತರ ರೂಪಾಯಿಗಳನ್ನು ಸಂಪಾದಿಸಿದರು. ಆದರೆ ನಮ್ಮ ಮಂತ್ರಾಲಯದ ಸೇವೆ ಸಲ್ಲಿಸಿ ಶ್ರೀ ಗುರುರಾಜರ ಅಡಿದಾವರಗಳಲ್ಲಿ ತಮ್ಮ ಪಾಲಿಗೆ ಬಂದ ಭೂಮಿಯನ್ನು ಅರ್ಪಿಸಿದರು. ಅಲ್ಲಿ ಒಂದು ಆಶ್ರಮವನ್ನು ಶ್ರೀ ರಾಘವೇಂದ್ರಗುರುರಾಜರ ಹೆಸರಿನಲ್ಲಿ ನಡೆಯಿಸಲು ಅಪ್ಪಣೆಯನ್ನು ಕೋರಿದರು. ಶ್ರೀ ರಾಘವೇಂದ್ರ ರಾಯರು ಕೃಪಾದೃಷ್ಟಿಯಿಂದ ನೋಡಿ "ತಥಾಸ್ತು" ಎಂದಿರಬೇಕು ಶ್ರೀ ಅಪ್ಪಣ್ಣಾಚಾರ್ಯರಿಗೆ " ಸಾಕ್ಷೀಹಯಾ ಸ್ತೋತ್ರಹಿ " ಎಂಬ ವಾಣಿಯು ಅಭಯವನ್ನಿತ್ತಿರಲಿಲ್ಲವೆ? ಹಾಗೆಯೇ ಅತ್ಯಲ್ಪಕಾಲದಲ್ಲಿ ನೆರವೇರಿದ ಸಾಧನೆಗಳೆಲ್ಲವನ್ನು ಗಮನಿಸಿದರೆ ಶ್ರೀಗುರುರಾಜರ ಕರುಣೆಯೇಸಾಕ್ಷಿಯಲ್ಲದೆ ಮತ್ತೇನು.

ಕಾರ್ಯ ಸಾಧನೆ:-

ನಮ್ಮ ಆಶ್ರಮದ ಬಯಲಿನಲ್ಲಿ ಬೃಂದಾವನವನ್ನು ಸ್ಥಾಪಿಸಲು ಹಾಗು ಒಂದು ವೇದಪಾಠಶಾಲೆಯನ್ನು ತೆರೆಯಲು ಕಟ್ಟಡದ ರೂಪರೇಖೆಗಳು ತಯಾರಾಗಿ ಅನುಮತಿಯನ್ನು ಸಹ ಪಡೆದಿವೆ, ಆದರೆ ಇದೆಲ್ಲಕ್ಕೂ ಮಿಗಿಲಾಗಿ ಶ್ರೀ ರಾಯರಿಗೆ ಸುತ್ತು ಮುತ್ತಲಿನ ಬಡವರ ಕಷ್ಟನಿವಾರಣೆ ಮಿಗಿಲಾಯಿತೆಂದು ಕಾಣುತ್ತದೆ, ಅಲ್ಲಿಯ ಬಾಲಕರು ವಿದ್ಯಾಭ್ಯಾಸಕ್ಕೆ ಬೆಂಗಳೂರು ನಗರದವಲ್ಲಿರುವ ಹೈಸ್ಕೂಲ್‌ಗಳಿಗೆ ಬರುತ್ತಿದ್ದರು ನಮ್ಮ ಅತ್ಯಲ್ಪಪ್ರಯತ್ನದಿಂದ ಆಶ್ರಮದಲ್ಲಿ ಒಂದು ಪ್ರೌಢಶಾಲೆಯನ್ನು ತೆರೆಯಲು ಸರ್ಕಾರ ಅನುಮತಿ ಯನ್ನಿತ್ತಿದೆ. ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿವರ್ಗಕ್ಕೆ

ಈ ಮಹದುಪಕಾರಕ್ಕೆ ಕೃತಜ್ಞರಾಗಿದ್ದೇವೆ. ಪ್ರಾರಂಭವಾಗಿರುವ ಈ ಶಾಲೆಯಲ್ಲಿ ಸುಮಾರು 45 ಮಂದಿ ವಿದ್ಯಾರ್ಥಿಗಳು ಓದುವವರಿದ್ದಾರೆ. ಇದಕ್ಕೆ ತಕ್ಕ ಕಟ್ಟಡ ಮತ್ತು ಇತರೆ ಸೌಕರ್ಯಗಳನ್ನು ನಮ್ಮ ಅಧ್ಯಕ್ಷರೇ ಒದಗಿಸಿಕೊಟ್ಟಿದ್ದಾರೆ. ಇವಕ್ಕೆ ಗ್ರಾಮದ ವಾಸಿಗಳೆಲ್ಲರೂ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾರೆ ಶಾಲೆಯ ಬಾಲಕರಿಗೆ ನಿಯಮಿತ ಪಾಠ ಕ್ರಮಗಳ ಜೊತೆಗೆ ಮಾತಾ-ಪಿತೃಗಳಲ್ಲಿ ಭಕ್ತಿ ಹಾಗೂ ನಮ್ಮ ಆರ್ಯಸಂಸ್ಕೃತಿಯಲ್ಲಿ ಶ್ರದ್ಧೆಯನ್ನು ವಹಿಸುವ ಬುನಾದಿಯನ್ನು ಹಾಕಲಾಗಿದೆ. ನಮ್ಮ ಅಧ್ಯಕ್ಷರಿಗೆ ಅತ್ಯಂತ ಪ್ರೀತಿಕರವಾದ ಕೆಲಸವೆಂದರೆ ಶ್ರೀ ಗುರುರಾಘವೇಂದ್ರರ ಸೇವೆಯನ್ನು ಸಲ್ಲಿಸುವುದು-ಯಾವ ನಿಮಿತ್ತದಿಂದ ಭೂಮಿಯಲ್ಲಿ ಅವತರಿಸಿದರೋ ಆ ಮಹತ್ಕಾರ್ಯವನ್ನು ಮುಂದುವರಿಸುವುದು. ಶ್ರೀ ವಾದೀಂದ್ರತೀರ್ಥರ ಮಾತಿನಲ್ಲಿ ಹೇಳುವುದಾದರೆ.

ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದ ಲಬ್ಧಾಂಕುರಶ್ರೀಃ ॥
ಪ್ರತ್ನೈರೀಷ ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನ ಶಾಖಃ ॥
ಮೌನೀಶ ವ್ಯಾಸ ರಾಜಾ ದುದಿತಕಿ ಸಲಯಃ ಪುಷ್ಪಿ ತೋಽಯಂ ಜಯೀಂದ್ರಾತ್ ಅದ್ಯ
ಶ್ರೀ ರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವ ಸಿದ್ಧಾಂತಶಾಖೀ ॥

ಶ್ರೀ ಮನ್ಮಧ್ವ ಸಿದ್ಧಾಂತವೆಂಬ ವೃಕ್ಷಕ್ಕೆ ಬೀಜವನ್ನು ಬಿತ್ತಿದವರು ಸಾಕ್ಷಾತ್ ನಾರಾಯಣ ರೂಪಿಯಾದ ವೇದ ವ್ಯಾಸರು. ವೇದಾರ್ಥ ನಿರ್ಣಾಯಕ ಬ್ರಹ್ಮ ಸೂತ್ರಗಳನ್ನು ರಚಿಸಿ ದರು. ಅದರ ಅರ್ಥ ವಿವರಣಾತ್ಮಕ ಭಾಷ್ಯ ಅನುವ್ಯಾಖ್ಯಾನಾದಿ ಗ್ರಂಥಗಳನ್ನು ಶ್ರೀ ಮಧ್ವಾಚಾರ್ಯರು ರಚಿಸಿದರು. ಆಚಾರ್ಯರ ಸಾಕ್ಷಾತ್ ಶಿಷ್ಯರುಗಳಾದ ತ್ರಿವಿಕ್ರಮ ಪಂಡಿತಾಚಾರ್ಯರೇ ಮೊದಲಾದವರು. ತಮ್ಮ ಟೀಕೆಟಿಪ್ಪಣಿಗಳಿಂದ ಇದೇ ಕಾರ್ಯ ವನ್ನು ಮುಂದುವರೆಸಿದರು. ಈ ದಿಶೆಯಲ್ಲಿ ಜಯತೀರ್ಥರ ಕಾರ್ಯವಾದರೊ ಅಸದೃಶ ಅವರು ರಚಿಸಿರುವ ಶ್ರೀ ಮನ್ನ್ಯಾಯ ಸುಧಾ-ಇಪ್ಪತ್ತೊಂದು ವಿಮತೀಯರವಾದಗಳ ನ್ನು ಖಂಡಿಸಿ ದ್ವೈತಸಿದ್ಧಾಂತವನ್ನು ಸಮರ್ಥಿಸಿದ್ದಾರೆ. ಹಾಗೆಯೇ ಶ್ರೀವ್ಯಾಸರಾಜರು ತಮ್ಮ 'ವ್ಯಾಸತ್ರಯ'ವೆಂಬ ಪ್ರಖ್ಯಾತಗ್ರಂಥಗಳಿಂದ ನಮ್ಮ ಸಿದ್ಧಾಂತದಲ್ಲಿ ನಮ್ಮ ಮನಸ್ಸು - ಚಿಂತನೆ - ಧೃಢವಾಗಿ ಬೇರೂರುವಂತೆಮಾಡಿದ್ದಾರೆ. ವಿಜಯೀಂದ್ರರ ದೆಶೆ ಯಿಂದ ಈ ಮಹಾವೃಕ್ಷವು ಪುಷ್ಪಗಳಿಂದ ಮನೋಹರವಾಗಿ ಮೆರೆಯಿತು. ಶ್ರೀ ರಾಘವೇಂದ್ರರ ಸೇವೆಯಿಂದ ಅಮೃತರಸಭರಿತವಾದ ಫಲಗಳು - ಶೋಭಿಸುತ್ತಿವೆ. ಈ ಮಹಾವೃಕ್ಷವು ಸತ್ಯ ಲೋಕದವರೆಗೂ ಬೆಳೆದು ನಿಂತಿದೆ ದೇವತೆಗಳು ಶ್ರೀವಾಯು ದೇವರು ಭೋಲೋಕದಲ್ಲಿ ಅವತರಿಸಿ ನಡೆಸಿರುವ ಮಹತ್ಕಾರ್ಯಕ್ಕೆ ಮೆಚ್ಚಿ ಈ ಫಲ ಪುಷ್ಪಗಳನ್ನೂ ಆದರದಿಂದ ಸ್ವೀಕರಿಸಿ ಶ್ರೀ ಮನ್ನಾರಾಯಣ ಪಾದಕಮಲಗಳಲ್ಲಿ ಅರ್ಪಿಸುವರಾಗಿದ್ದಾರೆ.

ಶ್ರೀ ಮನ್ಮಧ್ವಾಚಾರ್ಯರು-ಸಜ್ಜನರ ಉದ್ಧಾರಾರ್ಥವಾಗಿ-ಅವರವರಸ್ವರೂ
ಪಾನಂದಾವಿರ್ಭಾವಕ್ಕೆ ಕಾರಣೀಭೂತವಾದ ಶಾಸ್ತ್ರಗಳನ್ನು ರಚಿಸಿದರು. ಅದ್ದರಿಂದಲೆ
ಅವರು ಶ್ರೀಮದಾನಂದ ತೀರ್ಥರೆಂದು ಪ್ರಸಿದ್ಧರಾದರು. ಆ ಗ್ರಂಥಗಳೆಲ್ಲವೂ ಸಂಸ್ಕೃತ
ದಲ್ಲಿಯೆ ಇದ್ದು - ಸಾಮಾನ್ಯಜನರಿಗೆ ತಿಳಿಯುವಂತಿಲ್ಲ. ಪಾಠ ಹೇಳುವ ಜನರೂ
ಕಮ್ಮಿಯಾಗುತ್ತಿದ್ದಾರೆ. ಆದ್ದರಿಂದ ಸರ್ವಮೂಲವೆಂದು ಪ್ರಸಿದ್ಧವಾದವರಿಂದ
ರಚಿತವಾಗಿರುವ ಮೂವತ್ತೇಳು ಗ್ರಂಥಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಸಾಧ್ಯ
ವಾದಷ್ಟು ಇತರರ ಟೀಕೆ ಟಿಪ್ಪಣಿಗಳನ್ನು ಸಹ ವದಗಿಸಿ ಮಧ್ವ ಸಿದ್ಧಾಂತ ಪ್ರಚಾರ
ಕಾರ್ಯವನ್ನು ಮುಂದುವರಿಸಬೇಕೆಂಬುದೇ ನಮ್ಮ ಆಶ್ರಮದ ಉತ್ಕಟ ಆಕಾಂಕ್ಷೆ-
ದೀಕ್ಷೆ.

ನಮ್ಮ ಆಶ್ರಮದ ಆಶ್ರಯದಲ್ಲಿ ಪ್ರತಿವರ್ಷವೂ ಶ್ರೀ ಮನ್ಮಧ್ವನವಮಿ
ಮತ್ತು ಶ್ರೀ ರಾಘವೇಂದ್ರರ ಆರಾಧನೆಯನ್ನು ಅತ್ಯಂತ ವಿಜೃಂಭಣೆಯಿಂದ
ನೆರವೇರಿಸುತ್ತಿದ್ದೇವೆ. ಪಂಡಿತೋತ್ತಮರಿಂದ ಸರ್ವಮೂಲ ಗ್ರಂಥಗಳನ್ನೂ ಕುರಿತು
ಉಪನ್ಯಾಸಗಳನ್ನೇರ್ಪಡಿಸಲಾಗುತ್ತಿದೆ. ಪೂಜಾ ಪ್ರಸಾದವಿನಿಯೋಗ ಸಮಾರಾಧನೆ
ಗಳೂ ತಪ್ಪದೆ ನಡೆಯುತ್ತಿವೆ. ಈ ಸಂದರ್ಭಗಳಿಗೆ ಹೆಚ್ಚು ಬೆಲೆಕೊಟ್ಟಿರುವುದು
-ಪ್ರತಿಸಾರಿಯೂ ದ್ವೈತಸಿದ್ಧಾಂತಕ್ಕೆ ಸಂಬಂಧಪಟ್ಟ ಗ್ರಂಥಗಳ ಪ್ರಕಾಶನ ಮತ್ತು
ವಿದ್ವಾಂಸರಿಗೆ ಗೌರವಸಮರ್ಪಣೆ. ಈ ದಿಶೆಯಲ್ಲಿ ಅನೇಕ ವಿದ್ವಾಂಸರು ಸಹಾಯವ
ಸಗಲು ಮುಂದು ಬಂದಿದ್ದಾರೆ. ಈ ಎಲ್ಲಾ ಪ್ರಕಟಣೆಗಳ ಮುಖ್ಯ ಸಂಪಾದಕರಾಗಿ
ಶ್ರೀ ಮದಾಚಾರ್ಯರ ಸೇವೆಯನ್ನು ಸಲ್ಲಿಸಲು ಪಂಡಿತ ಜಾಲಿಹಾಳ್ ಕೇಶವಚಾರ್ಯ
ರು ಮುಂದೆ ಬಂದಿರುವುದು ನಮ್ಮ ಸುಯೋಗವೇ ಸರಿ. ಅವರಿಗೂ ಇತರ ಪಂಡಿತ
ವರ್ಗಕ್ಕೂ ನಾವು ಚಿರಋಣಿಗಳು.

ಇಲ್ಲಿಯವರೆಗೆ ಹೊರಬಂದಿರುವ ಗ್ರಂಥಗಳು ಶ್ರೀ ಹರಿಗುರು ಭಕ್ತಿ ಕುಸು
ಮಾಂಜಲಿ, ಶ್ರೀಮನ್ಮಧ್ವಚರಿತಮಾನಸ-ದ್ವಾದಶಸ್ತೋತ್ರ, ಕೃಷ್ಣಾಮೃತ ಮಹಾರ್ಣವ
ಸದಾಚಾರಸ್ಮೃತಿ, ಈ ರೌದ್ರಿ ನಾಮಸಂ। ಶ್ರಾವಣ ಬಹುಳ ದ್ವಿತೀಯಾ
ತಾ॥ 27-8-1980 - ರಂದು ಕನ್ನಡ ಸರಳಾನುವಾದದಿಂದಕೂಡಿದ ಶ್ರೀ ಮದಣು
ಭಾಷ್ಯವನ್ನು ಬಿಡುಗಡೆ ಮಾಡಲು ಏರ್ಪಡಿಸಲಾಗಿದೆ. ಪಂಡಿತ ಹನುಮೇಶಾ
ಚಾರ್ಯಗಂಗೂರರವರು ಕನ್ನಡ ಅರ್ಥಾನುವಾದವನ್ನು ಮಾಡಿ ಮಹದುಪ್ರಕಾರ
ಮಾಡಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು. ಎಲ್ಲಕ್ಕೂ ಮಿಗಿಲಾಗಿ ಈ ಗ್ರಂಥ
ಬಿಡುಗಡೆಮಾಡಲು ಶ್ರೀ ಜಗದ್ಗುರು ಶ್ರೀ ಮನ್ಮಧ್ವಾಚಾರ್ಯ ಮೂಲ ಸಂಸ್ಥಾನ
ಶ್ರೀ ಮದುತ್ತರಾದಿ ಮಠಾಧೀಶರಾದ ಶ್ರೀ ೧೦೦೮ ಶ್ರೀ ಶ್ರೀ ಮತ್ಸತ್ಯ ಪ್ರಮೋದ
ತೀರ್ಥಂಗಳವರು ಈ ಅಮೂಲ್ಯ ಗ್ರಂಥದ ಬಿಡುಗಡೆಯನ್ನು ತಮ್ಮ ಅಮೃತ
ಹಸ್ತದಿಂದ ನೆರವೇರಿಸಲು ಇಲ್ಲಿಗೆ ದಯಮಾಡಿಸಿ ಬಂದಿರುವುದು ನಮ್ಮ ಆಶ್ರಮದ

ಚರಿತ್ರೆಯಲ್ಲಿ ಸುವರ್ಣಾಕ್ಷರಗಳಲ್ಲಿ ಬರಯಲ್ಪಡುವದಿನ. ಅವರ ಕೃಪಾಕಟಾಕ್ಷದಿಂದಲಿ ನಾವೆಲ್ಲರೂ ಉದ್ಧೃತರಾಗಿದ್ದೇವೆ ನಿತ್ಯವೂ ಶ್ರೀ ಮೂಲರಾಮ ಚಂದ್ರದೇವರ ಪೂಜೆಯನ್ನು ಮಾಡತಕ್ಕ ಅವರ ಕರಕಮಲಗಳಿಂದ ಬಿಡುಗಡೆಮಾಡಲ್ಪಟ್ಟ ಈ ಅಣುಭಾಷ್ಯವು - ಅರ್ಥಾನು ಸಂದಾನಪೂರ್ವಕ ನಿತ್ಯ ಪಾರಾಯಣಕ್ಕೆ ನೆರವಾಗಲಿ. ಆಶ್ರಮದ ಪರವಾಗಿ ಶ್ರೀಗಳವರಿಗೆ ಅನಂತಪ್ರಣಾಮಗಳು

ಇನ್ನು ಮುಂದ ಬರಲಿರುವ ಗ್ರಂಥಗಳು - ದಶೋಪನಿಷತ್ತುಗಳು - ಹಾಗೂ ಶ್ರೀ ಮದ್ಭಗವದ್ಗೀತಾ ಭಾಷ್ಯ ತಾತ್ಪರ್ಯ ಹಾಗು ಇತರ ಗ್ರಂಥಗಳು, ಈ ಎಲ್ಲ ಗ್ರಂಥಗಳೂ ಹಣದಾಶೆಯಿಂದ ಪ್ರಕಟಿತವಾದುದಲ್ಲವೆಂದು ಹೇಳಬಯಸುತ್ತೇವ. ಸಕಲ ಬಂಧುಗಳೂ ಈ ಗ್ರಂಥಗಳ ಉಪಯೋಗವನ್ನು ಹೊಂದಿ ಶ್ರೀ ಮದಾಚಾರ್ಯರ ಕೃಪೆಗ ಪಾತ್ರರಾಗಬೇಕೆಂಬುದೇ ನಮ್ಮ ಆಶೆ ಗ್ರಂಥಗಳನ್ನು ಉಚಿತವಾಗಿ ಹಂಚಲು ಸಿದ್ಧರಿದ್ದೇವ

ಕೊನೆಯದಾಗಿ ನಾವು ಈ ಆಶ್ರಮದ ಸ್ಥಾಪನೆ - ಬೆಳವಣಿಗೆಗೆ ಕಾರ್ಯಸಾಧನೆ ಗಳಿಗೆ ಎಲ್ಲಾ ಹಂತಗಳಲ್ಲೂ ಕಾರಣಕರ್ತರಾದ ನಮ್ಮ ಆಶ್ರಮದ ಅಧ್ಯಕ್ಷರಾದ ಬಿ. ಎನ್. ವಾಸುದೇವರಾಯರ ಔದಾರ್ಯ, ಕಾರ್ಯತತ್ಪರತೆಯನ್ನು ಮೆಚ್ಚಲೇ ಬೇಕು. ಅವರ ಧರ್ಮ ಪತ್ನಿ ಶ್ರೀಮತಿ ಚಿ॥ ಸೌ॥ ಪದ್ಮಾವತಿಯವರೂ ಇವರು ಸಹ ಅವರ ಸಕಲಸತ್ಕಾರ್ಯಗಳಲ್ಲಿ ನೆರವುನೀಡುತ್ತಿದ್ದಾರೆ.

ಇವರುಗಳಿಗೆ ಕರುಣಾಳುವಾದ ಭಗವಂತನು ಅನಂತ ಸುಖಸಂಪತ್ತುಗಳ ನ್ನಿತ್ತು ಕಾಪಾಡಲಿ. ಈ ಮಹತ್ಕಾರ್ಯದಲ್ಲಿ ಭಾಗವಹಿಸಿ-ಸಹಕರಿಸುತ್ತಿರುವ ಸಕಲ ಭಕ್ತವರ್ಗಕ್ಕೂ ನಮ್ಮ ಅನಂತ ವಂದನೆಗಳು

T R Anand Murthy M.A ,B.T,,
Principal, Arya Vidya Shala
Junior College,
Hon Secretary
Sri Raghavendra Ashrama

ರಾಘವೇಂದ್ರ ಆಶ್ರಮದ ಪರವಾಗಿ
ಟಿ. ಆರ್. ಆನಂದಮೂರ್ತಿ
27-8-1980

# ಒಪ್ಪೋಲೆ

| ಪುಟ | ಸಾಲು | ತಪ್ಪು | ಸರಿ |
|---|---|---|---|
| vii | 1 | ಗುರುಸ್ಸಾಕ್ಷಾ | ಗುರವಸ್ಸಾಕ್ಷಾ |
| | 4 | ಸರ್ಹೇ | ಸರ್ವೇ |
| viii | 19 | ದರ್ಶನಗಳ | ದರ್ಶನಗಳು |
| | 26 | ಜಗದ್ವ್ಯವ್ಯಹಾರ | ಜಗದ್ವ್ಯವಹಾರ |
| ix | 9 | ಅಪೌಕ್ಷಟೀತ್ವ | ಅಪೌರುಷೇಯತ್ವ |
| | 14 | ಸತತ | ಸತ್ಯ |
| | 25 | ಪತಂಜುಗಳ | ಪತಂಜಲಿಗಳ |
| | 25 | ಜೈಯಿಂಗಳ | ಜೈಮಿನಿಗಳ |
| x | 17 | ಯದಾರ್ಥ | ಯಥಾರ್ಥ |
| xi | 5 | ಪ್ರಹಾಣಾಮು | ಪ್ರಹಾಣಾಯು |
| | 21 | ವಾದಾರ್ಥ | ಪದಾರ್ಥ |
| xii | 10 | ಸಾಧಿಸಿರುವನು | ಸಾಧಿಸಿರುವರು |
| | 20 | ಸಭಯೋ | ಸಘೂಂಬೀಃ |
| | 20 | ನೋನ್ನೃತೆ | ನೋಽಶ್ನೃತೆ |
| x.ii | 1 | ಅವಕಾಶವನ್ನೀಡುವಂತೆ | ಅವಕಾಶವನ್ನೀಯುದಂತೆ |
| | 4 | ಆಸ್ತೋಭವು | ಅಸ್ತೋಭಮ |
| | 6 | ದುುಖ್ಯ | ಮುಖ್ಯ |
| | 8 | ಸೂತ್ರಸ್ವಂ | ಸೂತ್ರತ್ವಂ |
| | 10 | ವಿಹೋ | ವಿದೋ |
| | 17 | ಸೂತ್ರಾಸುಕಾಸಾರಿಭಿಃ | ಸೂತ್ರಾನು (ಕಾ) ಸಾರಿಭಿಃ |
| xiv | 6 | ಅದ್ವೋತಪರ | ಅದ್ವೈತಪರ |
| | 21 | ಭಕ್ತಿಶ್ಲೋಕ | ಭಕ್ತಿಯೋ |
| xv | 5 | ದ್ವೋತರ್ಣಂತೆ | ಪ್ರವರ್ತಂತೆ |
| | 12 | ಸುಮುಕ್ತ್ಯಯಃ | ಸುಯುಕ್ತ್ಯಯಃ |
| xvii | 3 | ದುಷ್ಟ | ದುಷ್ಟಶಿಕ್ಷಣ. ಶಿಷ್ಟ– |
| | 19 | ಕಾಪ್ಯ | ರೌಪ್ಯ |
| | 20 | ತರ್ಕಣಂತಃ | ತರ್ಕತಃ |

| | | | |
|---|---|---|---|
| xviii | 1 | ಬವಮರ್ಯಾಂ | ಬದರ್ಯಾಂ |
| | 2 | ತಾಪ್ಪರ್ಯ | ತಾತ್ಪರ್ಯ |
| | 4 | ವಿಧಾವು | ವಿಧಾಯ |
| | 20 | ನ್ಯಾಮಸಂಗ್ರಹವಾದ | ನ್ಯಾಯಸಂಗ್ರಹರೂಪವಾದ |
| | 23 | ಶಾಸ್ತ್ರಾವರಣ | ಶಾಸ್ತ್ರಪಾರಾಯಣ |
| | 28 | ಅನತತ | ಅನಂತ |
| xix | 1 | ತ್ವಮಾಜ್ಞಾ | ತ್ವಯಾಜ್ಞಾ |
| | 19 | ಗಾರಾಯಣ | ಪಾರಾಯಣ |
| | 24 | ಅಚ್ಯುತಪ್ರೇಕ್ಷಾಚಾರ್ಯಸು | ಅಚ್ಯುತಪ್ರೇಕ್ಷಾಚಾರ್ಯರು |
| xx | 20 | ಪಹೋದರ | ಸಹೋದರ |
| 2 | 19-23 | ವಿಷ್ನ | ವಿಘ್ನ |
| 3 | 1 | ದೋಷ ಅರ್ಜಿತಂ | ದೋಷ ವರ್ಜಿತಂ |
| 4 | 2 | ವಿಷಯಗಗನ್ನು | ವಿಷಯಗಳನ್ನು |
| | 11 | ಪ್ರಣೇತಾ— — — — | ಪ್ರಣೇತಾಜ್ಯೋತಿರಿತ್ಯಾದ್ಯೈಃ |
| | 15 | ವಿಜಿಹಾಸ್ಯಃ | ವಿಜಿಜ್ಞಾಸ್ಯಃ |
| 8 | 10 | ಬವತಾ | ಖವತ |
| 10 | 11 | ವಾಚ್ಯೈ(ಕೈ) ಶ್ಚ | ವಾಚ್ಯೈ(ಕೈ)ಶ್ಚ |
| | 14 | ಯಚ್ಚ ಜ್ಞಾ— — — — | ಯಚ್ಛಬ್ದಾಯೋಗವೃತ್ತ್ಯಯಃ |
| 11 | 28 | ಸ್ವರ | ಸರ್ವ |
| 12 | 15 | ನಿತ್ರ | ನಿತ್ಯ |
| | 20 | ಚ್ಛುತಿಃ | ಚ್ಛ್ರುತಿಃ |
| | 27 | ಆಕ್ಷೇರುಷೇಯ | ಅಪೌರುಷೇಯ |
| 14 | 26 | ರತಾಂ | ತಾಂ |
| 15 | 19 | ತದ್ವರಗಃ | ತದ್ವಶಗಃ |
| 17 | 25 | ಎರಕ್ತಃ | ವಿರಕ್ತಃ |
| 18 | 1 | ಸ್ಮೃತಿಗಳಿರದ | ಸ್ಮೃತಿಗಳಿಂದ |
| 19 | 24 | ಹ್ಯಖಿಲೈಃ | (ಹ್ಯ) ಖಿಲೈಃ |
| | 25 | ಸರ್ವವೇದ್ಯಶ್ಚ | ಸರ್ವವೇದೈಶ್ಚ |
| 21 | 19 | ಮೋಕ್ಷ | ಮೋಕ್ಷೇ |
| 22 | 1 | ಬ್ರಹ್ಯ | ಬ್ರಹ್ಮ |
| | 18 | ಫರಿದ | ಫಲದ |

# ಶ್ರೀರಾಘವೇಂದ್ರಾಶ್ರಮದ ಪ್ರಕಟನೆಗಳು

1) ಶ್ರೀ ಹರಿಗುರುಭಕ್ತಿ ಕುಸುಮಾಂಜಲಿ (ಕನ್ನಡ ಅನುವಾದ ಸಹಿತ)

2) ಶ್ರೀ ಮನ್ಮಧ್ವಚರಿತ ಮಾನಸ ,,

3) ಶ್ರೀ ದ್ವಾದಶಸ್ತೋತ್ರಂ ,,

4) ಸದಾಚಾರ ಸ್ಮೃತಿಃ ,,

5) ಶ್ರೀ ಕೃಷ್ಣಾಮೃತ ಮಹಾರ್ಣವಃ ,,

ನಮ್ಮ ಮುಂದಿನ ಪ್ರಕಟನೆಗಳು

1) ಆನಂದತೀರ್ಥಭಗವತ್ಪಾದಾಚಾರ್ಯರಿಂದ
ವಿರಚಿತ ದಶೋಪನಿಷದ್ಭಾಷ್ಯಗಳು (ಕನ್ನಡ ಅನುವಾದ ಸಹಿತ)

2) ಶ್ರೀ ಮದ್ಭಗವದ್ಗೀತಾತಾತ್ಪರ್ಯ

3) ಶ್ರೀ ಮದ್ಭಗವದ್ಗೀತಾ ಭಾಷ್ಯ

ದೊರೆಯುವ ಸ್ಥಳ –

ಶ್ರೀ ರಾಘವೇಂದ್ರಾಶ್ರಮ
ನಂ. 56/10, ನೇ ಅಡ್ಡ ರಸ್ತೆ, ಮಲ್ಲೇಶ್ವರಂ
ಬೆಂಗಳೂರು–560 055